ಶ್ರೀ

# ಮುಕುಂದ ಸ್ತೋತ್ರ ಮಾಲೆ

(ಕನ್ನಡ ಅನುವಾದದೊಡನೆ)

ಅನುವಾದಕ

ಹೆಮ್ಮಿಗೆ ದೇಶಿಕಾಚಾರ್ಯ

ಪ್ರಕಾಶಕ

ಹೆಮ್ಮಿಗೆ ದೇಶಿಕಾಚಾರ್ಯ, ಬೆಂಗಳೂರು.

ಶ್ರೀ

# ಮುಕುಂದ ಸ್ತೋತ್ರ ಮಾಲೆ

(ಕನ್ನಡ ಅನುವಾದದೊಡನೆ)

ಅನುವಾದಕ

ಹೆಮ್ಮಿಗೆ ದೇಶಿಕಾಚಾರ್ಯ

ಪ್ರಕಾಶಕ

ಹೆಮ್ಮಿಗೆ ದೇಶಿಕಾಚಾರ್ಯ, ಬೆಂಗಳೂರು

G. Sivapillai 22/1/62

# ಮುನ್ನುಡಿ

ಶ್ರೀಃ

ಶ್ರೀ ಗುರುಭ್ಯೋನಮಃ

ಶ್ರೀಮತೇ ನಾರಾಯಣಾಯ ನಮಃ

ನಾಹಂ ವೇದೈಃ ನ ತಪಸಾ ನ ದಾನೇನ ನ ಚೇಜ್ಯಯಾ
ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥
ಭಕ್ತ್ಯಾತ್ವನನ್ಯಯಾ ಶಕ್ಯಃ । ಅಹಮೇವಂ ವಿಧೋಽರ್ಜುನ
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥

"ಕೇವಲ ವೇದಾಭ್ಯಾಸದಿಂದಲಾಗಲಿ, ತಪಸ್ಸಿನಿಂದಾಗಲಿ, ಆಡಂಬರದ ಪೂಜೆಗಳಿಂದಲಾಗಲಿ ನನ್ನನ್ನು ಕಾಣಲು ಸಾಧ್ಯವಿಲ್ಲ. ಅನನ್ಯಭಕ್ತಿಯೊಂದ ರಿಂದಲೇ ನನ್ನನ್ನು ತಿಳಿಯಲು, ಕಾಣಲು ಮತ್ತು ಹೊಂದಲು ಶಕ್ಯ" ಎಂಬುದಾಗಿ ಶ್ರೀಕೃಷ್ಣನು ಅನುಗ್ರಹಿಸಿ ಸೂಚಿಸಿದ ಮಹಾಮಾರ್ಗದ ತಿರುಳನ್ನು ತಿಳಿದು ನಡೆದ ಭಗವತ್ಪ್ರೇಮಿಗಳಲ್ಲಿ ಗಣ್ಯರು ಕುಲಶೇಖರರೆಂಬುವ ರೊಬ್ಬರು. ಶ್ರೀ ಕುಲಶೇಖರರು ಹರಿಭಕ್ತಿಯಲ್ಲಿ ಮಗ್ನರಾದ ಆಳ್ವಾರು ಗಳೆಂಬ ತಮಿಳು ದೇಶದ ಭಕ್ತಪರಂಪರೆಗೆ ಸೇರಿದವರು. ಸುಮಾರು ಕ್ರಿಸ್ತ ಶಕ ಐದನೆಯ ಶತಮಾನದಲ್ಲಿ ತಿರುವಾಂಕೂರಿನ ರಾಜರಾಗಿದ್ದರು. ಭಗ ವತ್ಪರಾಯಣರಾದ ಇವರಿಗೆ ಅಧಿಕಾರ ಸಂಬಂಧವಾದ ಕಾರ್ಯಗಳಿಂದ ತನ್ಮಯತೆಗೆ ತೊಡಕಾಯಿತು. ಆದರೂ ಇವರ ಹಿರಿಯ ಜೀವನದಲ್ಲಿ ಭಕ್ತಿ ಯಿಂದ ಮೈಮರೆತ ಅನೇಕ ಘಟನೆಗಳು ಸುಪ್ರಸಿದ್ಧವಾಗಿವೆ.

ಒಮ್ಮೆ ರಾಮಾಯಣ ಪಾರಾಯಣ ನಡೆಯುತ್ತಿದ್ದಾಗ ಶ್ರೀರಾಮನು ನಿಸ್ಸಹಾಯನಾಗಿ ಪ್ರಬಲವಾದ ಖರಸೈನ್ಯದೊಡನೆ ಯುದ್ಧ ಮಾಡಬೇಕಾದ ಸಂದರ್ಭಕೇಳಿ ರಾಮಪರವಶರಾದ ಇವರ ಹೃದಯವು ಉದ್ರೇಕಗೊಳ್ಳಲಾಗಿ, ಕೇಳುತ್ತಿರುವುದು ಇತಿಹಾಸ ಕಥನವೆಂಬುದನ್ನು ಮರೆತು ತಮ್ಮ ಸೈನ್ಯಕ್ಕೆ

ಯುದ್ಧಕ್ಕೆ ಹೊರಡುವಂತೆ ಕಟ್ಟಾಜ್ಞೆ ಮಾಡಿ ತಾವೂ ಹೊರಡುವ ಸಂಭ್ರಮ ದಲ್ಲಿದ್ದರಂತೆ. ಪಾಠಕನು ಯುಕ್ತಿಯಿಂದ ಒಡನೆ ಶ್ರೀರಾಮನ ವಿಜಯ ವಾರ್ತೆಯನ್ನು ಪಠನಮಾಡಿ ಆ ಪ್ರಯತ್ನವನ್ನು ನಿಲ್ಲಿಸಿದನಂತೆ . . . . ಶ್ರೀ ಕುಲಶೇಖರರು ಶ್ರೀ ವೇಂಕಟಾದ್ರಿಯಲ್ಲಿ ಶ್ರೀನಿವಾಸನ ಸಾಮೀಪ್ಯಭಾಗ್ಯ ತನಗೆ ದೊರೆಯಬೇಕೆಂದು ಮೊರೆಯಿಟ್ಟವರು ; ಆ ಪವಿತ್ರ ಸನ್ನಿವೇಶದಲ್ಲಿ ಮರವಾಗಿಯಾಗಲಿ ಮೀನಾಗಿಯಾಗಲಿ ಪಕ್ಷಿಯಾಗಿಯಾಗಲಿ ಯಾವ ರೂಪ ದಲ್ಲಿಯಾದರೂ ತನಗೆ ಜನ್ಮ ಬರಲೆಂದು ಹಾರೈಸಿದವರು. ಶ್ರೀನಿವಾಸನ ಕಟಾಕ್ಷ ಬೀಳುವ ಮತ್ತು ಭಕ್ತರು ತುಳಿದಾಡುವ ಕಲ್ಲಿನ ಚಪ್ಪಡಿಯಾಗಿರಲು ಬಯಸಿ ಇವರು ಪ್ರಾರ್ಥಿಸಿದ್ದಾರೆ. ಈಗಲೂ ಶ್ರೀನಿವಾಸನ ಮಂದಿರದಲ್ಲಿ ಒಂದು ಚಪ್ಪಡಿಗೆ ಕುಲಶೇಖರಪ್ಪಡಿಯೆಂದು ಹೆಸರಿದೆಯಂತೆ. ಹೀಗೆ ಭಕ್ತಿಯ ಮಹಾಪ್ರವಾಹದಲ್ಲಿ ಮಗ್ನರಾದ ಇವರಿಗೆ ರಾಜ್ಯಾಧಿಕಾರ ಅಸಹ ನೀಯವಾದುದು ಸಹಜ. ಮಗನಿಗೆ ಪಟ್ಟಾಭಿಷೇಕ ಮಾಡಿ ಮುಂದೆ ಜೀವನ ವನ್ನೆಲ್ಲಾ ಪೂರ್ಣವಾಗಿ ಭಗವಂತನ ಉಪಾಸನೆಗೆ ಇವರು ಸಮರ್ಪಿಸಿದರು. ಶ್ರೀರಂಗ, ತಿರುಪತಿ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಈಶಸೇವೆ ಮಾಡುತ್ತಾ ಸಂಚರಿಸಿ ಕೊನೆಯಲ್ಲಿ ಮನ್ನಾರ್ ಕೋವಿಲಿನ ಶ್ರೀಕೃಷ್ಣಸಾನಿಧ್ಯದಲ್ಲಿ ಈ ಮಹಾನುಭಾವರು ಆತ್ಮನಿವೇದನವನ್ನು ಮಾಡಿಕೊಂಡರು.

**ಮುಕುಂದಮಾಲಾ ಸ್ತೋತ್ರ** ಶ್ರೀ ಕುಲಶೇಖರರು ಹಾಡಿದುದು ; ಭಗವಂತನಲ್ಲಿ ಸರ್ವಭಾವದಿಂದಲೂ ಅವರು ಮೊರೆಯಿಟ್ಟ ಮೊರೆ. ಈ ಮೂಲಕ ಅವರು ಭಗವಂತನಲ್ಲಿ ತ್ರಿಕರಣವನ್ನೂ ಸಮರ್ಪಿಸಿದ್ದಾರೆ. ಬೇರೆಲ್ಲ ಭಾವವನ್ನೂ ತ್ಯಜಿಸಿ ಭಕ್ತಿರಸದಲ್ಲಿ ಮಗ್ನರಾದ ಅವರು ಮತ್ತೆ ಮತ್ತೆ ದೇವರಲ್ಲಿ ಭಕ್ತಿಯನ್ನೇ ಬೇಡಿದ್ದಾರೆ. ಭಕ್ತಿಯೇ ಸಾಧನ, ಭಕ್ತಿಯೇ ಫಲ— ಎಂಬುದನ್ನು ಅವರು ಹಾಡಿದ್ದಾರೆ. ಅವರು ತಮಿಳಿನಲ್ಲಿ ಭಕ್ತಿರಸಮಯ ವಾದ ಪ್ರಬಂಧವೊಂದನ್ನು ಪಾಡಿದ್ದಾರೆ. ಮುಕುಂದನಿಗೆ ಕುಲಶೇಖರರು ಒಪ್ಪಿಸಿದ ಸ್ತೋತ್ರಮಾಲೆ **ಮುಕುಂದಮಾಲೆ.** ಮುಕುಂದ—ಎಂದು ಸ್ತೋತ್ರದ ಮೊದಲು ಸಂಬೋಧನೆಯಿದೆಯಾಗಿ ಈ ಹೆಸರು ಉಚಿತವಾಗಿದೆ. ಅಲ್ಲದೆ ಮುಕುಂದ ಎಂಬುದು ನವನಿಧಿಗಳಲ್ಲಿ ಅತಿಪ್ರಸಿದ್ಧವಾದ ಒಂದು

ನಿಧಿಯ ಹೆಸರು. ಸ್ತೋತ್ರದ ಒಂದೊಂದು ಶ್ಲೋಕವೂ ಭಕ್ತರಿಗೆ ಒಂದೊಂದು ನಿಧಿಯಿದ್ದಂತೆ. ಅನುಸಂಧಾನ ಮಾಡಿದವರು ಇದರ ಬೆಲೆಯನ್ನು ಬಲ್ಲರು. ಭಗವಂತನ ಧ್ಯಾನ—ಆತನನ್ನು ಕುರಿತು ಮಾಡುವ ಪ್ರಾರ್ಥನೆ, ಅವನ ವಿಷಯವನ್ನು ಕುರಿತು ಇತರರಿಗೆ ಹೇಳುವುದು ಇವು ಎಷ್ಟರಮಟ್ಟಿಗೆ ಹೃದಯವನ್ನು ಕರಗಿಸಬಲ್ಲುವು—ಎಷ್ಟು ರಸಮಯತೆಯನ್ನು ಒದಗಿಸಬಲ್ಲುವು ಎಂಬುದಕ್ಕೆ ಈ ಮುಕುಂದ ಸ್ತೋತ್ರ ದೊಡ್ಡ ಉದಾಹರಣೆ.

ಈ ಸ್ತೋತ್ರಮಾಲಿಕೆಯಲ್ಲಿನ ಮಿಕ್ಕ ಸ್ತೋತ್ರಗಳು ವೇದಾಂತದೇಶಿಕರೆಂದು ಪ್ರಸಿದ್ಧಿ ಹೊಂದಿದ ಶ್ರೀಮದ್ವೇಂಕಟನಾಥರಿಂದ ರಚಿತವಾದುವು. ಏಕನಿಷ್ಠೆಯಿಂದ ಭಗವಂತನನ್ನು ಆಶ್ರಯಿಸಿ, ಆತನ ಸೇವೆಗಾಗಿಯೇ ಜೀವನವನ್ನು ಮೀಸಲಾಗಿ ಎರೆದು ಅಸಂಖ್ಯ ಜನರನ್ನು ಭಕ್ತಿಯ ಮತ್ತು ಅನನ್ಯ ಭಾವದಿಂದ ಈಶ್ವರನನ್ನು ಆಶ್ರಯಿಸಿ ನಡೆಯುವ ಪ್ರಪತ್ತಿಯ ಹಾದಿಗೆ ಹಚ್ಚಿದ ಮಹಾನುಭಾವರು ಶ್ರೀ ವೇದಾಂತ ದೇಶಿಕರು. ವಿದ್ಯೆಗೆ, ವಿವೇಕಕ್ಕೆ ವಿರಕ್ತಿಗೆ, ಶಮದಮಾದಿ ಗುಣಸಂಪತ್ತಿಗೆ, ದಯೆಗೆ, ದಾಕ್ಷಿಣ್ಯಕ್ಕೆ ಆದರ್ಶಭೂತರಾದ ಈ ಭಕ್ತ ಭಾಗವತೋತ್ತಮರು ಸ್ಮರಣಮಾತ್ರದಿಂದ ಕಲುಷಕೋಟಿಯನ್ನು ಪರಿಹರಿಸುವ ಹಿರಿಮೆಯುಳ್ಳ ಭಕ್ತರ ವ್ಯೂಹಕ್ಕೆ ಸೇರಿದವರು. ನೆನದು ನೋಡಿದವರಿಗೆ ತಿಳಿಯಬಹುದಾದುದು ಈ ಮಹಾತ್ಮರ ಹಿರಿಮೆ, ವಿದ್ಯಾಮೂರ್ತಿಯಾದ ಶ್ರೀ ಹಯಗ್ರೀವನ ದಿವ್ಯಕಟಾಕ್ಷಕ್ಕೆ ಪಾತ್ರರಾದ ಈ ಮಹಾತ್ಮರು ಭಗವಂತನನ್ನು ಸಾಕ್ಷಾತ್ಕರಿಸದ ಮೂರ್ತಿ ವಿಶೇಷವಿಲ್ಲ. ಸಾಧುಸಂತರಿಗೆ ನಿದರ್ಶನಪ್ರಾಯರಾದ ಈ ಪೂಜ್ಯರಿಂದ ರಚಿತವಾದ ಸ್ತೋತ್ರಗಳು ಅನೇಕ. ಅವುಗಳಲ್ಲಿ ತಿರುವಹೀಂದ್ರಪುರದ ಗರುಡ ನದೀ ತೀರದಲ್ಲಿ ಪ್ರಖ್ಯಾತನಾದ ಶ್ರೀ ಅಚ್ಯುತನನ್ನು ಕುರಿತು ಮಾಡಿದ ಸ್ತೋತ್ರ **ಅಚ್ಯುತ ಶತಕ.** ಪ್ರಾಕೃತ ಭಾಷೆಯಲ್ಲಿ ಆರ್ಯಾಛಂದಸ್ಸಿನಲ್ಲಿ ರಚಿತವಾದ ಈ ಸ್ತೋತ್ರದ ಸಂಸ್ಕೃತಚ್ಛಾಯೆಯನ್ನು ಮಾತ್ರ ಕಾಲಾನುಗುಣವಾಗಿ ಇಲ್ಲಿ ಕೊಟ್ಟಿದೆ. ಜೀವನದ ಅನಂತಕ್ಲೇಶಗಳಿಂದ ಬಿಡುಗಡೆ ಹೊಂದಬೇಕಾದರೆ ನಿಸ್ಸಮಾಭ್ಯಧಿಕನೂ ಸರ್ವಶಕ್ತನೂ ಸರ್ವಾಧಾರನೂ ಕಾರುಣ್ಯಪೂರ್ಣನೂ ಆದ ಭಗವಂತನ ಆಶ್ರಯದಿಂದ ಹೊರತು ಬೇರೆ

ಶಕ್ಯವಿಲ್ಲ. ಇದು ಎಲ್ಲ ಜ್ಞಾನದ ತಿರುಳು—ಎಂಬುದನ್ನು ಸೂಚಿಸಿ ಆ ಭಗವಂತನ ಕಲ್ಯಾಣಗುಣಗಳನ್ನು ಹಾಡಿ ಅತನ ದಿವ್ಯಾಂಗ ಸೌಷ್ಠವವನ್ನು ಅನುಭವಿಸಿ ಅನನ್ಯಭಾವದಿಂದ ಆತನನ್ನು ಮರೆಹೊಕ್ಕು, ನಾವು ಮರೆ ಹೊಗುವ ರೀತಿಯನ್ನು ಇಲ್ಲಿ ಶ್ರೀ ವೇಂಕಟನಾಥರು ತೋರಿಕೊಟ್ಟಿದ್ದಾರೆ. "ತಾಯಿ ಕೂಸಿಂಗಾಗಿ ಪಥ್ಯವನು ಸೇವಿಸುತ ನಡೆದು ಕಾಪಿಡುವಂತೆ ರಕ್ಷಿಸಚ್ಯುತನೆ" (೯೨)—ಎಂಬ ಅವರ ಪ್ರಾರ್ಥನೆ ಎಷ್ಟು ಹೃದಯಂಗಮವೆಂಬುದನ್ನು ಅರಿಯಬಹುದು. "ಅರಿವಿಲ್ಲದೆ ಕಿರಿಯಂದಿನಲ್ಲಿ ಎಂದೋ ಒಮ್ಮೆ ಬೇಡರ ಪಡೆಗೆ ಸಿಲುಕಿಹೋಗಿ ಅವರ ನಡುವೆ ವಾಸಿಸುತ್ತಾ ತಾನು ಯಾರೆಂಬುದನ್ನೇ ಮರೆತು ತಾನು ಬೇಡರ ಜಾತಿಯ ಹುಡುಗನೆಂತಲೇ ತಿಳಿದಿರುವ ರಾಜ ಕುಮಾರನೊಬ್ಬನನ್ನು ತಂದೆಯಾದ ರಾಜನು ಅವನಿಗಾಗಿ ಚಿಂತಿಸುತ್ತಾ ಹಾತೊರೆಯುತ್ತಿರುವಾಗ ಮಂತ್ರಿಶ್ರೇಷ್ಠನೊಬ್ಬನು ಆತನನ್ನು ಪತ್ತೆಹಚ್ಚಿ ಬಿಡಿಸಿ ತಂದು ಒಪ್ಪಿಸಲು ಹಿರಿದು ಹಿಗ್ಗಿ ಆತನನ್ನು ಸಂಸ್ಕರಿಸಿ ಪಟ್ಟಕ್ಕೆ ಯೋಗ್ಯವಾಗುವಂತೆ ಮಾಡಲು ತಂದೆಯೇ ಏರ್ಪಡಿಸುವಂತೆ ನೀನು ನನ್ನನ್ನು ಆಚಾರ್ಯಾರ್ಪಣೆಯ ಮೂಲಕ ಪರಿಗ್ರಹಿಸಿ ಕಾಪಿಡಬೇಕು" ಎಂದು ದೇಶಿಕರು ಭಗವಂತನನ್ನು ಪ್ರಾರ್ಥಿಸಿದ್ದಾರೆ. ಈ ಭಾವನೆಯ ಭವ್ಯತೆ ಚಿಂತನಾವೇದ್ಯ. ಅಚ್ಯುತನ ಈ ದಿವ್ಯ ಸ್ತೋತ್ರವನ್ನು ಭಕ್ತರು ಅನುಸಂಧಾನ ಮಾಡಿ ಸವಿಯಬೇಕು.

ವೇದಾಂತಾಚಾರ್ಯರ **ದಶಾವತಾರ ಸ್ತೋತ್ರ** ತನ್ನದೇ ಆದ ವಿಶಿಷ್ಟ ಸೌಂದರ್ಯದಿಂದ ಕೂಡಿದ ರಮ್ಯ ಪದ್ಯಗುಚ್ಛ. ನಿತ್ಯಾನುಸಂಧಾನಕ್ಕೆ ಸುಲಭವಾದ ಈ ಸ್ತೋತ್ರದಲ್ಲಿ ಅವರ ವರ್ಣನಾವೈಖರಿ ಅದ್ಭುತವಾಗಿದೆ. ಒಂದೊಂದು ಅವತಾರದ ಸಾರಸರ್ವಸ್ವವೂ ಹೊಸಬಗೆಯಲ್ಲಿ ಇಲ್ಲಿ ಸಂಗ್ರಹಿಸಿ ಸೂಚಿತವಾಗಿದೆ. ಹಾಗೆಯೇ ಕಾಂಚೀನಗರದಲ್ಲಿ ವಿಖ್ಯಾತವಾದ ಭವಗಂತನ ಅಷ್ಟಭುಜಮೂರ್ತಿಯನ್ನು ಕುರಿತ ಅವರ 'ಅಷ್ಟಭುಜಾಷ್ಟಕ'ವು ಪ್ರಪತ್ತಿ ಧರ್ಮದ ಹುರುಳಿನ ತಿರುಳು. ವಿರಾಮ ದೊರೆಯದ ಗೊಂದಲದ ಈ ಕಾಲದಲ್ಲಿ ಈ ಪುಟ್ಟ ಸ್ತೋತ್ರ ಭಗವಂತನಲ್ಲಿ ಆತ್ಮಾರ್ಪಣೆ ಮಾಡತಕ್ಕ ಭಕ್ತರಿಗೆ ತುಂಬ ಸಹಾಯಕವಾಗಿದೆ. ಆಶ್ರಿತಸಂರಕ್ಷಣದ ತ್ವರೆಯಿಂದ—ವಿಳಂಬಾ

ಸಹಿಷ್ಣುತೆಯಿಂದ ದ್ವಿಗುಣಿತವಾದಂತೆ ಮೆರೆಯುತ್ತಿರುವುವಂತೆ ಭಗವಂತನ ಭುಜಗಳು ! ಎಂತಹ ಸುಂದರ ವರ್ಣನೆ ! ಭಕ್ತಮಹಾಶಯರು ನಾಸ್ತಿಕತೆ ಬಲವಾಗಿ ಅನಿಷ್ಟಕ್ಕೆ ಹೆದ್ದಾರಿ ಹೆಚ್ಚುತ್ತಿರುವ ಈ ಕಾಲದಲ್ಲಿ ಧರ್ಮದ ತಿರುಳಾದ ಇಂತಹ ಸ್ತೋತ್ರಗಳನ್ನು ಮಕ್ಕಳಿಗೆ ಬಾಲ್ಯದಲ್ಲಿಯೇ ಅನುಸಂಧಾನ ಮಾಡಿಸುವುದರಿಂದ ಅವರಲ್ಲಿ ಭಕ್ತಿನಿಷ್ಠತೆ, ಭಗವದೇಕಶರಣತೆ ಒದಗಿ ಸಮಸ್ತ ಸತ್ಕರ್ಮಗಳಕ್ಕೆ ಹಾದಿಯಾಗುವುದೆಂದು ನಮ್ಮ ದೃಢ ವಿಶ್ವಾಸ.

ಈ ಸ್ತೋತ್ರಮಾಲೆಯ ಪ್ರಕಾಶನದ ಬಗ್ಗೆ ಒಂದೆರಡು ಮಾತು: ಸಹೃದಯ ಶಿಖಾಮಣಿಗಳೂ ಭಕ್ತವರ್ಯರೂ ಆದ ಶ್ರೀಮಾನ್ ಎಸ್. ಎಸ್. ರಾಘವಾಚಾರ್ಯ, ಎಂ.ಎ.—ಅವರ ಉದ್ಯಮದ ಮತ್ತು ಉತ್ತೇಜನದ ಫಲವಾಗಿ ಈ ಮುಕುಂದ ಸ್ತೋತ್ರಮಾಲೆ ಈಶ್ವರಾರ್ಪಣಕ್ಕಾಗಿ ಕನ್ನಡಿಗರ ಕೈಗೆ ವಿನಮ್ರವಾಗಿ ಸಮರ್ಪಿಸಲ್ಪಟ್ಟಿದೆ. ಸಂಸ್ಕೃತದಲ್ಲಿರುವ ಭವ್ಯವಾದ ಸ್ತೋತ್ರಗಳನ್ನು ಯಥಾಶಕ್ತಿ ಕನ್ನಡ ಭಾಷೆಯ ಮೂಲಕ ಪ್ರಚಾರ ಮಾಡಲು ಶ್ರೀ ರಾಘವಾಚಾರ್ಯರಿಗೆ ಪ್ರೇರಣೆ ಮತ್ತು ಉತ್ತೇಜನ ಬಂದುದು ಪ್ರಾತಃಸ್ಮರಣೀಯರಾದ ಶ್ರೀ ರಾಮಕೃಷ್ಣಾಶ್ರಮದ ಸ್ವಾಮಿ ಧೀರೇಶಾನಂದಜಿಯವರಿಂದ. ಸತ್ಸಹವಾಸವು ಜೀವನಕ್ಕೆ ಸಾರ್ಥಕತೆಯನ್ನುಂಟುಮಾಡುತ್ತದೆಯೆಂಬುದು ಇಲ್ಲಿ ಉದಾಹೃತವಾಗಿದೆಯೆನ್ನಬಹುದು. ಮಧುಮಥನನ ಕಟಾಕ್ಷಕ್ಕೆ ಪಾತ್ರರಾದ ಸಾತ್ವಿಕರ ಒಡನಾಟ ಭಕ್ತಿಮಾರ್ಗದಲ್ಲಿ ನಡೆಯಬಯಸುವವರಿಗೆ ಪ್ರಧಾನವಾದುದು. ಅದು ಭಗವತ್ಪ್ರಾಪ್ತಿಗೆ ಸಾಧನವಾದ ಬುದ್ಧಿಯೋಗವನ್ನು ತರಬಲ್ಲುದು—ಈಶ್ವರಾನುಗ್ರಹಕ್ಕೆ ಕಾರಣವಾಗುವುದು. ಅದರ ಬಯಕೆ ಮಾತ್ರ ನಮಗೆ ಅವಶ್ಯವಾಗಿರಬೇಕು.

ಇಲ್ಲಿ ಅಚ್ಚಾಗಿರುವ ಸ್ತೋತ್ರಮಾಲಿಕೆ ಸಂಸ್ಕೃತಜ್ಞರಿಗೆ ಪಾಠ ಸೌಕರ್ಯವನ್ನು ಕೊಡಬಲ್ಲುದು. ಕನ್ನಡದ ಅನುವಾದವು ಭಗವಂತನಲ್ಲಿ ತಮ್ಮ ಹೃದಯವನ್ನು ತೋಡಿಕೊಳ್ಳಲು ಬಯಸುವ ಕನ್ನಡಿಗ ಸೋದರರಿಗಾಗಿ ಮತ್ತು ಎಳೆಯರಿಗಾಗಿ. ಪದ್ಯರೂಪದ ಅನುವಾದವು ಹೃದ್ಯವಾಗಿ ಹಾಡಲು ಅನುಕೂಲವಾಗಿ ಮನಸ್ಸನ್ನೂ ಶ್ರುತಿಗೊಳಿಸಿ ಶುಚಿಗೊಳಿಸಲು ಮೇಲೆಂದು ಭಾವನೆ,

ಸಾಧ್ಯವಾದಷ್ಟು ಸರಳವಾದ ರೀತಿಯಲ್ಲಿ (ಪ್ರಾಸಾದಿಗಳ ದೆಸೆಯಿಂದ ರಚನೆಯು ಅರ್ಥವರಿಯಲು ಕಷ್ಟ ಕೊಡದಂತೆ) ಇಲ್ಲಿನ ಅನುವಾದವಿದೆ. ಹಿರಿಯರು ಮಕ್ಕಳಿಗೆ ಈ ಸ್ತೋತ್ರಗಳ ಅನುಸಂಧಾನಕ್ಕೆ ಪ್ರೇರಿಸಿ ಮನಸ್ಸನ್ನು ತಿದ್ದಬೇಕೆಂದು ಪ್ರಾರ್ಥಿಸುತ್ತೇವೆ. ಹೀಗೆಯೇ ಪ್ರಸಿದ್ಧರಾದ ಭಕ್ತೋತ್ತಮರಿಂದ ರಚಿತವಾದ ಬೇರೆಯ ಸ್ತೋತ್ರಗಳನ್ನೂ ಕನ್ನಡಿಸಿ ಸಮರ್ಪಿಸಬೇಕೆಂಬ ನಮ್ಮ ಬಯಕೆ ಭಕ್ತಭಾಗವತರ ಉತ್ತೇಜನವನ್ನು ಅವಲಂಬಿಸಿದೆ.

ಇಲ್ಲಿನ 'ದಶಾವತಾರ ಸ್ತೋತ್ರ' ಶ್ರೀ ಮಾಸ್ತಿಯವರ ಕೃಪೆಯಿಂದ 'ಜೀವನ' ಪತ್ರಿಕೆಯಲ್ಲಿ ಮೊದಲು ಪ್ರಕಟವಾಯಿತು. ಶ್ರೀನಿವಾಸರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ಇಲ್ಲಿ ಅಚ್ಚಾಗಿರುವ ಸುಂದರವಾದ ಶ್ರೀಕೃಷ್ಣ ಚಿತ್ರವು ಮೈಸೂರಿನ ಸುಪ್ರಸಿದ್ಧ ಕಲಾನಿಪುಣರಾದ ಶ್ರೀಮಾನ್ ನಂಜುಂಡಸ್ವಾಮಿಯವರಿಂದ ಬರೆಯಲ್ಪಟ್ಟಿದು. ಅವರನ್ನು ಅಭಿನಂದಿಸುತ್ತೇವೆ. ಶ್ರೀ ವೇದಾಂತದೇಶಿಕರ ಭಾವಚಿತ್ರವು ವಿದ್ವಾನ್ ಶ್ರೀ ಎನ್. ಎಸ್. ಅನಂತರಂಗಾಚಾರ್ಯರವರ ಔದಾರ್ಯದಿಂದ ದೊರೆತುದು. ಅವರನ್ನೂ ವಿಶ್ವಾಸಪೂರ್ವಕ ಅಭಿನಂದಿಸುತ್ತೇವೆ. ಸಕಾಲದಲ್ಲಿ ಶ್ರದ್ಧಾವಿಶ್ವಾಸಗಳಿಂದ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದವರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

ಕಾರ್ತಿಕ ಬಹುಳ ದಶಮಿ
ಪ್ಲವ ಸಂವತ್ಸರ
ತಾ॥ ೨-೧೨-೧೯೬೧

ಇತಿ ಸುಜನ ಸೇವಕ
**ಹೆಮ್ಮಿಗೆ ದೇಶಿಕಾಚಾರ್ಯ**

ಶ್ರೀ



ಸರ್ವಧರ್ಮಾನ್ ಪರಿತ್ಯಜ್ಯ ।
ಮಾಮೇಕಂ ಶರಣಂವ್ರಜ ।
ಅಹಂತ್ವಾ ಸರ್ವ ಪಾಪೇಭ್ಯೋ ।
ಮೋಕ್ಷಯಿಷ್ಯಾಮಿ ಮಾಶುಚಃ ॥

॥ ಶ್ರೀಃ ॥

# ಶ್ರೀ ಮುಕುಂದಮಾಲಾ

ಘುಷ್ಯತೇ ಯಸ್ಯನಗರೇ ರಂಗಯಾತ್ರಾ ದಿನೇದಿನೇ ।
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ ॥

ಯಾವ ಮಹನೀಯನ ದಿವ್ಯನಗರದಲ್ಲಿ "ರಂಗಯಾತ್ರೆಗೆ ಹೊರಟಿದ್ದೇವೆ. ರಂಗಯಾತ್ರೆಗೆ ಹೋಗುತ್ತೇವೆ" ಎಂಬ ಉತ್ಸಾಹ ಪೂರ್ಣರಾದ ಯಾತ್ರಿಕರ ಸಡಗರದ ಕೂಗು ದಿನಗಟ್ಟಲೆ ಕೇಳಿಬರುತ್ತದೆಯೋ ಆ ರಾಜೇಂದ್ರ ಕುಲಶೇಖರನಿಗೆ ನಾನು ತಲೆಬಗ್ಗಿ ವಂದಿಸುತ್ತೇನೆ.

ಶ್ರೀವಲ್ಲಭೇತಿ ವರದೇತಿ ದಯಾಪರೇತಿ
ಭಕ್ತಪ್ರಿಯೇತಿ ಭವಲುಂಠನ ಕೋವಿದೇತಿ
ನಾಥೇತಿ ನಾಗಶಯನೇತಿ ಜಗನ್ನಿವಾಸೇತಿ
ಆಲಾಪನಂ ಪ್ರತಿಪದಂ ಕುರು ಮೇ ಮುಕುಂದ ॥ ೧ ॥

ಎಲೈ ಮುಕುಂದನೆ (ನಂಬಿದವರ ಹೃದಯದಲ್ಲಿ ಇಂಬುಗೊಂಡು ಅವರ ಸಮಸ್ತ ಇಷ್ಟಾರ್ಥಗಳನ್ನೂ ನೆರವೇರಿಸುವ ನಿಧಿಸ್ವರೂಪನೆ), ನನಗೆ ಹೆಜ್ಜೆಹೆಜ್ಜೆಗೂ, ಮಾತುಮಾತಿಗೂ ನಿನ್ನ ನಾಮಸ್ಮರಣೆಯುಂಟಾಗುವಂತೆ ಅನುಗ್ರಹಿಸು. ಲಕ್ಷ್ಮೀಪತೇ ವರದಾ, ಕರುಣಾಮಯ, ಭಕ್ತಜನ ಮಧುರ, ಸಂಸಾರ ಭಯ ನಿವಾರಣ ನಿಪುಣ, ನಾಥ, ಶೇಷಶಯನಾ, ಜಗನ್ನಿವಾಸ," ಎಂದು ಮೊದಲಾಗಿ ನಿಮಿಷ ನಿಮಿಷದಲ್ಲಿ ನಿನ್ನ ನಾಮಸಂಕೀರ್ತನವು ನನಗೆ ಒದಗುವಂತೆ ಅನುಗ್ರಹಿಸು.

ಜಯತುಜಯತು ದೇವೋ ದೇವಕೀನಂದನೋಽಯಂ
ಜಯತುಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ
ಜಯತುಜಯತು ಮೇಘಶ್ಯಾಮಲಃ ಕೋಮಲಾಂಗೋ
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಃ ॥ ೨ ॥

ಜಯಿಸಲಿ, ಜಯಿಸಲಿ, ದೇವಕೀ ನಂದನನಾದ ಈ ನಮ್ಮೊಡೆಯನು ಸರ್ವೋತ್ಕೃಷ್ಟನಾಗಿರಲಿ. ಜಯಿಸಲಿ, ಜಯಿಸಲಿ, ವೃಷ್ಣಿವಂಶಕ್ಕೆ ದಿವ್ಯ ದೀಪದಂತೆ ಪ್ರಕಾಶವೊದಗಿಸಿದ ಕೃಷ್ಣನು ಜಯಿಸಲಿ, ಜಯಿಸಲಿ, (ನೀರುಂಡ) ಮೇಘದಂತೆ ಶ್ಯಾಮವರ್ಣನಾದ (ನಮ್ಮ) ಕೋಮಲಾಂಗನು ಜಯಿಸಲಿ. ಜಯಿಸಲಿ, ಜಯಿಸಲಿ, ಭೂಭಾರವನ್ನು ಪರಿಹರಿಸುವವನಾದ (ನಮ್ಮ) ಮುಕುಂದನು ಸರ್ವೋತ್ಕೃಷ್ಟನಾಗಿ ಬಾಳಲಿ.

ಮುಕುಂದ ಮೂರ್ಧ್ನಾ ಪ್ರಣಿಪತ್ಯ ಯಾಚೇ
ಭವಂತಮೇಕಾಂತಮಿಯಂತಮರ್ಥಂ
ಅವಿಸ್ಮೃತಿಸ್ತ್ವಚ್ಚರಣಾರವಿಂದೇ
ಭವೇ ಭವೇ ಮೇಽಸ್ತು ಭವತ್ಪ್ರಸಾದಾತ್ ॥ ೩ ॥

ಮುಕುಂದನೆ, ನಿನಗೆ ತಲೆಬಗ್ಗಿ ನಮಸ್ಕರಿಸಿ ಇಷ್ಟೊಂದನ್ನು ಏಕಾಂತನಾಗಿ ಬೇಡುವೆನು:–ನಿನ್ನ ಅನುಗ್ರಹಬಲದಿಂದ ನನಗೆ ಜನ್ಮ ಜನ್ಮದಲ್ಲಿಯೂ ನಿನ್ನ ಚರಣಾರವಿಂದದ ಮರವೆಯಿಲ್ಲದಂತಾಗಲಿ.

ನಾಹಂ ವಂದೇ ತವಚರಣಯೋರ್ದ್ವಂದ್ವಮದ್ವಂದ್ವಹೇತೋಃ
ಕುಂಭೀಪಾಕಂ ಗುರುಮಪಿ ಹರೇ ನಾರಕಂ ನಾಪನೇತುಂ
ರಮ್ಯಾ ರಾಮಾಮೃದುತನುಲತಾ ನಂದನೇ ನಾಪಿ ರಂತುಂ
ಭಾವೇ ಭಾವೇ ಹೃದಯಭವನೇ ಭಾವಯೇಯಂ ಭವಂತಂ ॥ ೪ ॥

ಪ್ರಭುವೇ ! ಶ್ರೀಹರಿ, ನಾನು ನಿನ್ನ ಚರಣಾರವಿಂದಯುಗಳವನ್ನು ಸುಖದುಃಖವೇ ಮೊದಲಾದ ದ್ವಂದ್ವಗಳ ಗೊಂದಲದ ಬಿಡುಗಡೆಗಾಗಿ ವಂದಿಸುವುದಿಲ್ಲ ; ಕುಂಭೀಪಾಕವೆಂಬ ಗುರುತರವಾದ ನರಕದುಃಖವನ್ನು ನಿವಾರಿಸಲೆಂದು ನೆನೆಯುವುದಿಲ್ಲ. ನಂದನ ವನದಲ್ಲಿ ತರುಣೀಮಣಿಯರ ರಮ್ಯಕೋಮಲವಾದ ತನುಲತೆಗಳನ್ನುಕೂಡಿ ವಿಹರಿಸಲು ಬಯಸಿ ನಮಿಸುವುದಿಲ್ಲ – ಆದರೆ ಭಾವಭಾವದಲ್ಲಿ (ಪ್ರತಿಯೊಂದು ಇರವಿನಲ್ಲಿ) ಜನ್ಮಜನ್ಮದಲ್ಲಿ ನನ್ನ ಹೃದಯಗೃಹದಲ್ಲಿ ನಿನ್ನನ್ನು ಭಾವಿಸಲು ಬಯಸುವೆನು.

ನಾಸ್ಥಾ ಧರ್ಮೇ, ನ ವಸುನಿಚಯೇ, ನೈವ ಕಾಮೋಪಭೋಗೇ,
ಯದ್ಯದ್ಭವ್ಯಂ ಭವತು ಭಗವನ್! ಪೂರ್ವಕರ್ಮಾನುರೂಪಂ
ಏತತ್ಪ್ರಾರ್ಥ್ಯಂ ಮಮ ಬಹುಮತಂ ಜನ್ಮಜನ್ಮಾಂತರೇಽಪಿ
ತ್ವತ್ಪಾದಾಂಭೋರುಹಯುಗಗತಾ ನಿಶ್ಚಲಾ ಭಕ್ತಿರಸ್ತು ‖ ೫ ‖

ಭಗವನ್, ನನಗೆ ಧರ್ಮದಲ್ಲಿ ಆಸೆಯಿಲ್ಲ, ದ್ರವ್ಯಸಮೂಹದಲ್ಲಿ ಬಯಕೆಯಿಲ್ಲ, ಕಾಮೋಪಭೋಗದಲ್ಲಿಯೂ ಇಚ್ಛೆಯಿಲ್ಲ. ಪೂರ್ವಕರ್ಮಾನುಗುಣವಾಗಿ ಯಾವ ಯಾವುದು ಹೇಗೆ ಹೇಗೆ ಆಗಬೇಕೋ ಹಾಗೆ ನಡೆದುಕೊಳ್ಳಲಿ. ಆದರೆ ವಿಶೇಷಪ್ರೀತಿಯಿಂದ ನಾನು ನಿನ್ನನ್ನು ಪ್ರಾರ್ಥಿಸತಕ್ಕದ್ದು ಇದೊಂದು: ನನಗೆ ಜನ್ಮಜನ್ಮಾಂತರದಲ್ಲಿಯೂ ನಿನ್ನ ಚರಣಾರವಿಂದವೆರಡರಲ್ಲಿ ನಿಶ್ಚಲವಾದ ಭಕ್ತಿಯುಂಟಾಗಿರಲಿ.

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ, ಪ್ರಕಾಮಂ
ಅವಧೀರಿತಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ‖ ೬ ‖

ಎಲೈ ನರಕಾಂತಕನೆ, ನನಗೆ ಸ್ವರ್ಗದಲ್ಲಿಯೋ, ಭೂಮಿಯಲ್ಲಿಯೋ, ಎಲ್ಲಿ ಬೇಕಾದರೂ ಯಥೇಚ್ಛವಾಗಿ ವಾಸವಾಗಲಿ. ನರಕದಲ್ಲಿ ವಾಸವಾದರೂ ಚಿಂತೆಯಿಲ್ಲ, (ಆದರೆ) ಶರತ್ಕಾಲದ ಕಮಲವನ್ನು ಧಿಕ್ಕರಿಸುವಂತೆ ಮಧುರಕೋಮಲವಾದ ನಿನ್ನ ದಿವ್ಯ ಚರಣಯುಗಳವನ್ನು ಮಾತ್ರ ಮರಣದಲ್ಲಿಯೂ ಚಿಂತಿಸುವ ಪುಣ್ಯವಿರಲಿ.

ಕೃಷ್ಣ! ತ್ವದೀಯ ಪದಪಂಕಜ ಪಂಜರಾಂತಂ
ಅದ್ಯೈವ ಮೇ ವಿಶತು ಮಾನಸರಾಜಹಂಸಃ
ಪ್ರಾಣಪ್ರಯಾಣಸಮಯೇ ಕಫವಾತಪಿತ್ತೈಃ
ಕಂಠಾವರೋಧನವಿಧೌ ಸ್ಮರಣಂ ಕುತಸ್ತೇ ‖ ೭ ‖

ಹೇಕೃಷ್ಣ! ನನ್ನ ಮನಸ್ಸೆಂಬ ರಾಜಹಂಸವು ನಿನ್ನ ಪಾದಪದ್ಮವೆಂಬ ಪಂಜರದೊಳಗೆ ಈಗಲೇ ಸೇರಿಬಿಡಲಿ. ಪ್ರಾಣಪ್ರಯಾಣ ಸಮಯದಲ್ಲಿ (ಮರಣ ಕಾಲಕ್ಕೆ ಸರಿಯಾಗಿ) ನಿನ್ನನ್ನು ನೆನೆವೆನೆಂದರೆ ಕಫವಾತಪಿತ್ತಗಳ ಗೊಂದಲದ ತೊಂದರೆಯಿಂದ ಕೊರಲು ಬಿಗಿದುಕೊಳ್ಳುವ ಆ ಕಷ್ಟಸಮಯದಲ್ಲಿ ನಿನ್ನ ಸ್ಮರಣವು ದೊರಕುವ ಸಂಭವವುಂಟೇ?

ಚಿಂತಯಾಮಿ ಹರಿಮೇವ ಸಂತತಂ
ಮಂದ ಮಂದ ಹಸಿತಾನನಾಂಬುಜಂ
ನಂದಗೋಪ ತನಯಂ ಪರಾತ್ಪರಂ
ನಾರದಾದಿ ಮುನಿಬೃಂದ ವಂದಿತಂ ॥ ೮ ॥

ನಾನು ಎಂದೆಂದೂ ಶ್ರೀಹರಿಯನ್ನೇ ಚಿಂತಿಸುವೆನು. ಮಂದಹಾಸದಿಂದ ಕೂಡಿದ ವದನಾರವಿಂದವುಳ್ಳ ಆ ಶ್ರೀ ಹರಿಯನ್ನೇ ನಾನು ಎಂದೆಂದೂ ಚಿಂತಿಸುವೆನು. ನಂದಗೋಪನ ಕುಮಾರನಾಗಿ ಅವತರಿಸಿದ, ನಾರದರೇ ಮುಂತಾದ ಮುನಿಗಳ ವೃಂದದಿಂದ ವಂದಿತನಾದ ಆ ಪರಾತ್ಪರ ಹರಿಯನ್ನು ಧ್ಯಾನಿಸುವೆನು.

ಕರಚರಣಸರೋಜೇ ಕಾಂತಿಮನ್ನೇತ್ರಮೀನೇ
ಶ್ರಮಮುಷಿ ಭುಜವೀಚಿವ್ಯಾಕುಲೇಗಾಧಮಾರ್ಗೇ
ಹರಿಸರಸಿ ವಿಗಾಹ್ಯಾಪೀಯ ತೇಜೋಜಲೌಘಂ
ಭವಮರುಪರಿಖಿನ್ನಃ ಖೇದಮದ್ಯ ತ್ಯಜಾಮಿ ॥ ೯ ॥

ಅಹಹಾ ! ಸಂಸಾರವೆಂಬ ಮರಳುಕಾಡಿನಲ್ಲಿ ಅಲೆದಲೆದು ಬೆಂಡಾಗಿ ಬಳಲಿ ಬಾಯಾರಿದ ನನಗೆ ಒಂದು ಅಮೃತಸರಸ್ಸು ಸಿಕ್ಕಿದೆ. ಅದಕ್ಕೆ ಹರಿಸರಸ್ಸೆಂದು ಹೆಸರು. (ಶ್ರೀಹರಿಯೇ ಆ ನನ್ನ ಕೊಳವು) ಆತನ ದಿವ್ಯಚರಣಗಳು ಅಲ್ಲಿಯ ಕಮಲಗಳು, ಕಾಂತಿಮಯವಾದ ಆತನ ಕಣ್ಣುಗಳೇ ಅಲ್ಲಿನ ಮೀನುಗಳು, ಆತನ ಬಾಹುಗಳೇ ಅಲ್ಲಿನ ತೆರೆಗಳು, ಸಮಸ್ತ ಶ್ರಮಗಳನ್ನು ನೀಗಿ ನಲಿಸಬಲ್ಲ ಆಳವರಿಯಲಾಗದ ಈ ಕೊಳದಲ್ಲಿ ನಾನು ಮುಳುಗಿ, (ದಿವ್ಯವಾದ) ತೇಜಸ್ಸೆಂಬ ಇಲ್ಲಿನ ನಿರ್ಮಲೋದಕದ ರಾಶಿಯನ್ನು ಕಂಠಪೂರ್ತಿಯಾಗಿ ಕುಡಿದು ನನ್ನ ಖೇದವೆಲ್ಲವನ್ನೂ ಈಗ ನೀಗಿಕೊಳ್ಳುವೆನು.

ಸರಸಿಜನಯನೇ ಸಶಂಖಚಕ್ರೇ
ಮುರಭಿದಿ ಮಾ ವಿರಮಸ್ವ ಚಿತ್ತ ರಂತುಂ;
ಸುಖತರಮಪರಂ ನ ಜಾತು ಜಾನೇ
ಹರಿಚರಣ ಸ್ಮರಣಾಮೃತೇನ ತುಲ್ಯಂ ॥ ೧೦ ॥

ಎಲೈ ಮನಸ್ಸೇ, ಕಮಲದಳಮನೋಹಾರಿಯಾದ ಕಣ್ಣುಗಳುಳ್ಳವನೂ ಶಂಖಚಕ್ರಧಾರಿಯೂ ಆದ ಮುರಹರನೊಡನೆ ವಿಹರಿಸುವುದನ್ನು ಬಿಡಬೇಡವೋ !

(ಏಕೆನ್ನುವೆಯಾ) ಆ ಶ್ರೀಹರಿಯ ಚರಣಾರವಿಂದದ ಸ್ಮರಣೆಯೆಂಬ ಅಮೃತಕ್ಕೆ ಸಮಾನವಾದ ಬೇರೊಂದು ಸುಖಕರ ವಸ್ತುವನ್ನು ಎಂದೂ ಎಲ್ಲಿಯೂ ಕಾಣೆ.

ಮಾಭೀರ್ಮಂದಮನೋ ವಿಚಿಂತ್ಯ ಬಹುಧಾ ಯಾಮೀಶ್ಚಿರಂ ಯಾತನಾಃ
ನಾಮೀ ನಃ ಪ್ರಭವಂತಿ ಪಾಪ ರಿಪವಃ! ಸ್ವಾಮೀ ನನು ಶ್ರೀಧರಃ
ಆಲಸ್ಯಂ ವ್ಯಪನೀಯ ಭಕ್ತಿಸುಲಭಂ ಧ್ಯಾಯಸ್ವ ನಾರಾಯಣಂ
ಲೋಕಸ್ಯ ವ್ಯಸನಾಪನೋದನಕರೋ ದಾಸಸ್ಯ ಕಿಂ ನ ಕ್ಷಮಃ ॥ ೧೧ ॥

ಅರರೇ ಮೂಢನಾದ ಮನಸ್ಸೇ! ಯಮಲೋಕದ ಬಗೆಬಗೆಯಾದ ನರಕ ಯಾತನೆಗಳನ್ನು ಕುರಿತು ಚಿಂತಿಸಿ ಏಕೆ ತಲ್ಲಣಿಸುವೆ! ನಿನ್ನ ಭಯವನ್ನು ಬಿಡು. ಇನ್ನು ಪಾಪಗಳೆಂಬ ಶತ್ರುಗಳು ನಮ್ಮಮೇಲೆ (ತಮ್ಮ) ಅಧಿಕಾರವನ್ನು ನಡೆಸಲಾರವು. ಲಕ್ಷ್ಮೀಧರನು ನಮ್ಮ ಸ್ವಾಮಿಯಲ್ಲವೆ? ನಿನ್ನ ಜಡತೆಯನ್ನೂ, ಸೋಮಾರಿತನವನ್ನೂ ಬಿಟ್ಟು ಭಕ್ತಿಗೆ ಸುಲಭವಾಗಿ ವಶನಾಗುವ ಶ್ರೀನಾರಾಯಣನನ್ನು ಧ್ಯಾನಿಸು. (ಅಯ್ಯೋ ಪೆಚ್ಚೆ!) ಸಕಲ ಲೋಕದ ವ್ಯಸನವನ್ನು ಹೋಗಲಾಡಿಸುವ ಆತನು ದಾಸನಾದ ನಿನ್ನ ವ್ಯಸನವನ್ನು ನೀಗಲು ಶಕ್ತನಲ್ಲವೆ?

ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ
ಸುತ ದುಹಿತೃ ಕಳತ್ರ ತ್ರಾಣಭಾರಾರ್ದಿತಾನಾಂ
ವಿಷಮ ವಿಷಯತೋಯೇ ಮಜ್ಜತಾಮಪ್ಲವಾನಾಂ
ಭವತು ಶರಣಮೇಕೋ ವಿಷ್ಣುಪೋತೋ ನರಾಣಾಂ ॥ ೧೨ ॥

ಸಂಸಾರಸಾಗರದಲ್ಲಿ ಸೇರಿಹೋಗಿ ಸುಖದುಃಖಗಳೆಂಬ ದ್ವಂದ್ವಗಳ ಗಾಳಿಯ ಬಡಿತಕ್ಕೆ ಸಿಕ್ಕಿ, ಸತಿಸುತಾದಿಗಳ ಪೋಷಣೆಯ ಭಾರದಿಂದ ಕುಗ್ಗುತ್ತಾ ವಿಷಮವಾದ ಇಂದ್ರಿಯ ಸುಖಗಳ ಲಾಲಸೆಯ ನೀರಿನಲ್ಲಿ ಮುಳುಗಿ ಗತಿಗಾಣದೆ ಬಳಲುತ್ತಿರುವ ಮಾನವರಿಗೆ ವಿಷ್ಣುವೆಂಬ (ಸರ್ವಸಂಚಾರಿಯಾದ) ನಾವೆಯೊಂದೇ ಶರಣು!

ಭವಜಲಧಿಮಗಾಧಂ ದುಸ್ತರಂ ನಿಸ್ತರೇಯಂ
ಕಥಮಹಮಿತಿ ಚೇತೋ ಮಾಸ್ಮಗಾಃ ಕಾತರತ್ವಂ
ಸರಸಿಜದೃಶಿ ದೇವೇ ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ ತಾರಯಿಷ್ಯತ್ಯವಶ್ಯಂ ॥ ೧೩ ॥

ಎಲೈ ಮನಸ್ಸೇ! ಆಳವರಿಯಲಾಗದ ಅಗಾಧವೆನಿಸಿ ದಾಟಲಶಕ್ಯವಾದ ಸಂಸಾರಸಾಗರವನ್ನು ನಾನು ಹೇಗೆ ಉತ್ತರಿಸಿಯೇನು—ಎಂದು ಚಿಂತಿಸಿ ದೈನ್ಯದಿಂದ ಕುಗ್ಗಿಹೋಗಬೇಡ. ಕಮಲದಳದಂತೆ ಮನೋಹರವಾದ ಕಣ್ಣುಗಳುಳ್ಳವನೂ ನರಕನಿವಾರಣನೂ ಆದ ನಮ್ಮ ಪ್ರಭುವಿನಲ್ಲಿ ಅನನ್ಯವಾದ ಭಕ್ತಿಯೊಂದನ್ನಿಡು. ಅದು ನಿನ್ನನ್ನು ಅವಶ್ಯವಾಗಿ ಉದ್ಧರಿಸುವುದು.

ತೃಷ್ಣಾತೋಯೇ ಮದನಪವನೋದ್ಧೂತ ಮೋಹೋರ್ಮಿಮಾಲೇ
ದಾರಾವರ್ತೇ ತನಯ ಸಹಜ ಗ್ರಾಹಸಂಘಾಕುಲೇ ಚ
ಸಂಸಾರಾಖ್ಯೇ ಮಹತಿ ಜಲಧೌ ಮಜ್ಜತಾಂ ನಸ್ತ್ರಿಧಾಮನ್
ಪಾದಾಂಭೋಜೇ ವರದ! ಭವತೋ ಭಕ್ತಿನಾವಂ ಪ್ರಯಚ್ಛ ॥ ೧೪ ॥

ಹೇ ತ್ರಿಧಾಮನ್, ವರದಾ, ಆಸೆಯೆಂಬ ನೀರಿನಿಂದ, ಕಾಮವಾಯುವಿನಿಂದ ಹುಟ್ಟಿ ಹರಡುವ ಮೋಹವೆಂಬ ತೆರೆಗಳಸಾಲಿನಿಂದ, ಸತಿಯೆಂಬ ಸುಳಿಯಿಂದ, ಸಂತ ಸಹೋದರರೆಂಬ ಮೊಸಳೆಗಳಿಂದ—ಕ್ಷುಭಿತವಾಗಿ ಅಶಾಂತಿಮಯವಾದ ಸಂಸಾರವೆಂಬ ಮಹಾಸಾಗರದಲ್ಲಿ ಮುಳುಗಿ ತೊಳಲುತ್ತಿರುವ ನಮಗೆ ನಿನ್ನ ಚರಣಾರವಿಂದದ ಭಕ್ತಿಯೆಂಬ ನಾವೆಯನ್ನು ಅನುಗ್ರಹಿಸಿಕೊಡು.

ಮಾದ್ರಾಕ್ಷಂ ಕ್ಷೀಣಪುಣ್ಯಾನ್ ಕ್ಷಣಮಪಿ ಭವತೋ ಭಕ್ತಿಹೀನಾನ್ ಪದಾಬ್ಜೇ
ಮಾಶ್ರೌಷಂ ಶ್ರಾವ್ಯಬದ್ಧಂ ತವಚರಿತಮಪಾಸ್ಯಾನ್ಯದಾಖ್ಯಾನಜಾತಂ
ಮಾಸ್ಮಾರ್ಷಂ ಮಾಧವ ತ್ವಾಮಪಿ ಭುವನಪತೇ ಚೇತಸಾಪಹ್ನುವಾನಾನ್
ಮಾಭೂವಂ ತ್ವತ್ಸಪರ್ಯಾವ್ಯತಿಕರರಹಿತೋ ಜನ್ಮಜನ್ಮಾಂತರೇಽಪಿ ॥೧೫॥

ಲೋಕನಾಥನೆ, ನಿನ್ನ ಪಾದಾರವಿಂದದಲ್ಲಿ ಭಕ್ತಿಯಿಲ್ಲದ ಪುಣ್ಯಹೀನರನ್ನು ಕ್ಷಣಮಾತ್ರವಾದರೂ ನೋಡಲಾರೆ. ನಿನ್ನ ದಿವ್ಯಚರಿತವನ್ನುಳಿದು ಬೇರೆ ಯಾವ ಕಟ್ಟುಕಥೆಗಳನ್ನೂ ನಾನು ಕೇಳಲರಿಯೆ. ಎಲೈ ಮಾಧವನೇ, ಸಕಲ ಭುವನಪತಿಯಾದ ನಿನ್ನನ್ನೂ ಮನದಲ್ಲಿ ನೆನೆಯದೆ ಮರೆಯಿಸುವಂತಹ ಕೃತಘ್ನರನ್ನು ಎಂದೂ ನಾನು ಸ್ಮರಿಸದಂತಾಗಲಿ. ಅಷ್ಟೇಕೆ? ನಿನ್ನ ಆರಾಧನದ (ಪೂಜೆಯ) ಸಂಬಂಧವಿಲ್ಲದವನಾಗಿ ಜನ್ಮಜನ್ಮಾಂತರದಲ್ಲಿಯೂ ನಾನು ಸಂಭವಿಸಲಾರೆನು.

ಜಿಹ್ವೇ ಕೀರ್ತಯ ಕೇಶವಂ, ಮುರರಿಪುಂ ಚೇತೋ ಭಜ,
ಶ್ರೀಧರಂ
ಪಾಣಿದ್ವಂದ್ವ ಸಮರ್ಚಯ,-ಅಚ್ಯುತಕಥಾಃ ಶ್ರೋತ್ರದ್ವಯ ತ್ವಂ ಶೃಣು,
ಕೃಷ್ಣಂ ಲೋಕಯ ಲೋಚನದ್ವಯ, ಹರೇರ್ಗಚ್ಛಾಂಘ್ರಿಯುಗ್ಮಾಲಯಂ,
ಜಿಘ್ರ ಘ್ರಾಣ ಮುಕುಂದ ಪಾದತುಲಸೀಂ, ಮೂರ್ಧನ್,
ನಮಾಧೋಕ್ಷಜಂ ‖ ೧೬ ‖

ಎಲೈ ನಾಲಗೆಯೆ, ಕೇಶವನ ಗುಣಗಳನ್ನು ಗಾನಮಾಡು. ಓ ಮನಸ್ಸೇ, ಮುರಹರನಾದ ಆತನನ್ನು ಭಜಿಸು. ಎನ್ನ ಎರಡು ಕೈಗಳೇ, ಲಕ್ಷ್ಮೀಧರನನ್ನು ಅರ್ಚನೆಮಾಡಿರಿ. ಎಲೈ ಕಿವಿಗಳೇ, ಆ ಅಚ್ಯುತನ ದಿವ್ಯಚರಿತ್ರವನ್ನು ಶ್ರವಣ ಮಾಡಿರಿ. ನನ್ನ ನೇತ್ರಯುಗ್ಮವೆ, ಶ್ರೀಕೃಷ್ಣನನ್ನು ದರ್ಶನಮಾಡಿರಿ. ಎನ್ನ ಪಾದಗಳೇ, ಶ್ರೀ ಹರಿಯ ಆಲಯಕ್ಕೆ ನಡೆಯುವವರಾಗಿ. ನಾಸಿಕವೆ, ಮುಕುಂದನ ಪಾದಕ್ಕೆ ಅರ್ಪಿಸಿದ ತುಲಸಿಯನ್ನು ಆಘ್ರಾಣಿಸು. ಶಿರಸ್ಸೇ, ಅಧೋಕ್ಷಜನಿಗೆ ನಮಸ್ಕರಿಸಪ್ಪ.

ಹೇ ಲೋಕಾಃ! ಶೃಣುತ ಪ್ರಸೂತಿಮರಣವ್ಯಾಧೇಶ್ಚಿಕಿತ್ಸಾಮಿಮಾಂ
ಯೋಗಜ್ಞಾಃ ಸಮುದಾಹರಂತಿ ಮುನಯೋ ಯಾಂ
ಯಾಜ್ಞವಲ್ಕ್ಯಾದಯಃ
ಅಂತರ್ಜ್ಯೋತಿರಮೇಯಮೇಕಮಮೃತಂ ಕೃಷ್ಣಾಖ್ಯಮಾಪೀಯತಾಂ
ತತ್ಪೀತಂ ಪರಮೌಷಧಂ ವಿತನುತೇ ನಿರ್ವಾಣಮಾತ್ಯಂತಿಕಂ ‖ ೧೭ ‖

ಎಲೈ ಜನಗಳಿರಾ! ಯೋಗಜ್ಞರಾದ ಯಾಜ್ಞವಲ್ಕ್ಯರೇ ಮುಂತಾದವರು ಜನನಮರಣವೆಂಬ ವ್ಯಾಧಿಗೆ ಉದಾಹರಿಸಿರುವ ಈ ಔಷಧಿಯನ್ನು ಕೇಳಿರಿ. ಅಂತರಂಗದಲ್ಲಿ ಕಾಂತಿಮಯವಾದುದೂ, ಶಕ್ತ್ಯಾದಿಗಳು ಇಂತಹುದು—ಇಷ್ಟು—ಎಂದು ಅಳೆಯಲಾಗದುದೂ ಆದ 'ಕೃಷ್ಣ' ನೆಂಬ ಸರ್ವೌಷಧವನ್ನು ಸೇವಿಸಿರಿ. ಆ ಪರಮೌಷಧವನ್ನು ಸೇವಿಸಿದೊಡನೆ ಒಂದೇ ಬಾರಿಗೆ ಸರ್ವಭವರೋಗವೂ ಸಂಪೂರ್ಣವಾಗಿ ನಾಶವಾಗಿಹೋಗುವುದು.

ಹೇಮರ್ತ್ಯಾಃ, ಪರಮಂ ಹಿತಂ ಶೃಣುತ ವೋ ವಕ್ಷ್ಯಾಮಿ ಸಂಕ್ಷೇಪತಃ
ಸಂಸಾರಾರ್ಣವಮಾಪದೂರ್ಮಿ ಬಹುಳಂ ಸಮ್ಯಕ್ಪ್ರವಿಶ್ಯಸ್ಥಿತಾಃ
ನಾನಾಜ್ಞಾನಮಪಾಸ್ಯ ಚೇತಸಿ ನಮೋನಾರಾಯಣಾಯ–ಇತ್ಯಮುಂ
ಮಂತ್ರಂ ಸಪ್ರಣವಂ ಪ್ರಣಾಮಸಹಿತಂ ಪ್ರಾವರ್ತಯಧ್ವಂ ಮುಹುಃ ||೧೮||

ಆಪತ್ತುಗಳೆಂಬ ತೆರೆಗಳಿಂದ ತುಂಬಿದ ಸಂಸಾರಸಮುದ್ರದ ನಟ್ಟನಡುವೆ ಸಿಕ್ಕಿಬಿದ್ದು ದಡವನ್ನರಿಯದೆ ತೊಳಲುವ ಎಲೈ ಮಾನವರಿರಾ! ನಿಮಗೆ ಅತ್ಯಂತ ಹಿತವಾದ ಒಂದು ಸಲಹೆಯನ್ನು ಸಂಗ್ರಹವಾಗಿ ಸೂಚಿಸುತ್ತೇನೆ ಕೇಳಿರಿ:— ನಿಮ್ಮ ನೂರೆಂಟು ಬಗೆಯ ಚಿತ್ತವೃತ್ತಿಗಳನ್ನು ತೊಲಗಿಸಿ (ಬಗೆಬಗೆಯ ಚಿಂತೆಗಳನ್ನು ದೂರಮಾಡಿ) ಮನಸ್ಸಿನಲ್ಲಿ ಪ್ರಣವಸಹಿತವಾದ 'ನಮೋ ನಾರಾಯಣಾಯ' ಎಂಬ ಮಂತ್ರವನ್ನು ಮತ್ತೆ ಮತ್ತೆ ಪ್ರಣಾಮಪೂರ್ವಕವಾಗಿ ಅನುಸಂಧಾನ ಮಾಡಿರಿ.

ಪೃಥ್ವೀ ರೇಣುರಣುಃ ಪಯಾಂಸಿ ಕಣಿಕಾಃ ಸ್ಫಲ್ಗುಸ್ಫುಲಿಂಗೋ ಲಘು
ಸ್ತೇಜೋ, ನಿಃಶ್ವಸನಂ ಮರುತ್ತನುತರಂ ರಂಧ್ರಂ ಸುಸೂಕ್ಷ್ಮಂ ನಭಃ
ಕ್ಷುದ್ರಾ ರುದ್ರಪಿತಾಮಹ ಪ್ರಭೃತಯಃ ಕೀಟಾಃ ಸಮಸ್ತಾಸ್ಸುರಾಃ
ದೃಷ್ಟೇ ಯತ್ರ ಸ ತಾವಕೋ ವಿಜಯತೇ ಭೂಮಾವಧೂತಾವಧಿಃ || ೧೯ ||

ಭಗವನ್, ನಾರಾಯಣ, ನಿನ್ನ ವಿಭೂತಿಯಲ್ಲಿ ಈ ಅಖಂಡ ಪೃಥ್ವಿಯೂ ಒಂದು ಪರಮಾಣುವಾಗಿ ಕಾಣುವುದು. ಸಮಸ್ತ ಜಲರಾಶಿಗಳೂ ಒಂದು ಬಿಂದುವಿನಂತೆ ತೋರುವುವು. ಜಗತ್ತಿನ ತೇಜೋರಾಶಿಯೆಲ್ಲವೂ ಲಘುವಾದ ಒಂದು ಕಿಡಿಯಂತೆ, ವಾಯುಮಂಡಲವೆಲ್ಲವೂ ಲಘುವಾದ ಒಂದು ನಿಃಶ್ವಾಸದ ಉಸಿರಿನಂತೆ, ಅಪಾರವಾದ ಗಗನವೂ ಕೂಡ ಬಹಳ ಸಣ್ಣವಾದ ಒಂದು ಸೂಕ್ಷ್ಮರಂಧ್ರದಂತೆ ತೋರಿಬಿಡುವುವು. ಹಾಗೆಯೇ ನೋಡಿದರೆ ಬ್ರಹ್ಮರುದ್ರಾದಿಗಳೆಲ್ಲರೂ ಅಲ್ಲಿ ಕ್ಷುದ್ರಜೀವಿಗಳಂತೆ- ಸಮಸ್ತ ದೇವತೆಗಳೂ ಕ್ರಿಮಿಕೀಟಗಳಂತೆ-ಕಂಡುಬರುವರು. ಇಂತಹ ನಿನ್ನ ದಿವ್ಯಮಹಿಮೆಯು ಎಲ್ಲೆ ಮೀರಿದುದಾಗಿ ಸರ್ವೋತ್ಕೃಷ್ಟವಾಗಿರುವುದು.

ಬದ್ಧೇನಾಂಜಲಿನಾ, ನತೇನ ಶಿರಸಾ, ಗಾತ್ರೈಃ ಸರೋಮೋದ್ಗಮೈಃ,
ಕಂಠೇನ ಸ್ವರಗದ್ಗದೇನ, ನಯನೇನೋದ್ಗೀರ್ಣಬಾಷ್ಪಾಂಬುನಾ,
ನಿತ್ಯಂ ತ್ವಚ್ಚರಣಾರವಿಂದಯುಗಳಧ್ಯಾನಾಮೃತಾಸ್ವಾದಿನಾಂ
ಅಸ್ಮಾಕಂ ಸರಸೀರುಹಾಕ್ಷ! ಸತತಂ ಸಂಪದ್ಯತಾಂ ಜೀವಿತಂ || ೨೦ ||

ಎಲೈ ಪುಂಡರೀಕಾಕ್ಷನೆ, ಜೋಡಿಸಿದ ಕೈಗಳಿಂದಲೂ, ಬಗ್ಗಿಸಿದ ತಲೆಯಿಂದಲೂ, ರೋಮಾಂಚದಿಂದ ನಲಿಯುವ ಸರ್ವಾವಯವಗಳಿಂದಲೂ, ಕೂಡಿ ಆನಂದಾತಿಶಯದಿಂದ ಗದ್ಗದಿತವಾದ ಕಂಠವುಳ್ಳವರಾಗಿ, ಕಣ್ಣುಗಳಲ್ಲಿ ಧಾರಾಕಾರವಾಗಿ ಆನಂದಬಾಷ್ಪಗಳು ಹರಿಯುತ್ತಿರಲು ಕಮಲದಂತೆ ಮನೋಹರವಾದ ನಿನ್ನ ದಿವ್ಯಚರಣಯುಗಳದ ಧ್ಯಾನನೆಂಬ ಅಮೃತವನ್ನು ಸಂತತವೂ ಸೇವಿಸುವುದರಿಂದ ನಮ್ಮ ಜೀವಿತವು ಸಂಪದ್ಯುಕ್ತವಾಗಿ ಬೆಳೆಯಲಿ.

ಹೇ ಗೋಪಾಲಕ ! ಹೇ ಕೃಪಾಜಲನಿಧೇ, ಹೇ ಸಿಂಧುಕನ್ಯಾಪತೇ,
ಹೇ ಕಂಸಾಂತಕ, ಹೇ ಗಜೇಂದ್ರಕರುಣಾಪಾರೀಣ, ಹೇ ಮಾಧವ,
ಹೇ ರಾಮಾನುಜ, ಹೇ ಜಗತ್ತ್ರಯಗುರೋ, ಹೇ ಪುಂಡರೀಕಾಕ್ಷ,
ಮಾಂ
ಹೇ ಗೋಪೀಜನನಾಥ, ಪಾಲಯ, ಪರಂ ಜಾನಾಮಿ ನ ತ್ವಾಂ
ವಿನಾ ॥ ೨೧ ॥

ಎಲೈ ಗೋವಿಂದನೆ, ಲೋಕರಕ್ಷಣಕ್ಕೆ ನಿನ್ನಂತೆ ನಡುಕಟ್ಟಿನಿಂದವರಾರು ? ಎಲೈ ಕರುಣಾಸಾಗರ, ನಿನ್ನ ಕಾರುಣ್ಯಕ್ಕೆ ಅಳತೆಯೆಲ್ಲಿ ! ಲಕ್ಷ್ಮೀನಾಯಕ, ನಿನ್ನ ಔದಾರ್ಯವನ್ನು ಎಷ್ಟೆಂದು ಹೇಳಲಿ ? ಕಂಸಾಂತಕ, ದುಷ್ಟನಿಗ್ರಹಮಾಡಿ ಶಿಷ್ಟಪರಿಪಾಲನೆಯನ್ನು ಕ್ಷಿಪ್ರದಲ್ಲಿ ನಿನ್ನಂತೆ ಮಾಡಬಲ್ಲವರಾರು ? ಗಜೇಂದ್ರವರದಾ ! ಆರ್ತರನ್ನು ರಕ್ಷಿಸುವುದರಲ್ಲಿ ನಿನ್ನಂತೆ ಮೈಮರೆತು ನುಗ್ಗುವ ಕಾರಣ್ಯಮಯರುಂಟೆ ? ಎಲೈ ಮಾಧವನೆ, ನಿನ್ನಂತೆ ಸಕಲಜನರ ಕಣ್ಮನಂಗಳಿಗೆ ಮಧುರವಾದ ಮೂರ್ತಿಯುಳ್ಳವರಾರು ? ಹೇ ರಾಮಾನುಜ ! ಆಶ್ರಿತರಕ್ಷಣಕ್ಕೆ ಹಾತೊರೆದು ಸರ್ವಪ್ರಯತ್ನಗಳಿಂದಲೂ ಅವರ ಇಷ್ಟಸಿದ್ಧಿಗಾಗಿ ದುಡಿವ ಬಯಕೆಯು ಲೀಲೆಯಿಂದ ಸೇವಾವೃತ್ತಿಯನ್ನೂ ಅವಲಂಬಿಸಬಲ್ಲ ಸೌಶೀಲ್ಯದ ನಿನಗೆ ಸಮರೆಲ್ಲಿ ? ಓ ಜಗತ್ತ್ರಯದ ಗುರುವೆ ? ದೀನೋದ್ಧರಣಕ್ಕಾಗಿ ಪರಮ ಸಹಾನುಭೂತಿಯಿಂದ ಸರ್ವಸುಲಭವಾದ ಸದುಪಾಯಗಳನ್ನು ಬೋಧಿಸಿದ ನಿನ್ನಂತಹ ನಿಪುಣರುಂಟೆ ? ಎಲೈ ಪುಂಡರೀಕಾಕ್ಷನೆ ಅರ್ಧ ಅರಳಿದ ತಾವರೆಯ ಸೊಬಗಿನ ಸಿರಿಯುಳ್ಳ ಕಣ್ಗಳ ಕಟಾಕ್ಷಮಾತ್ರದಿಂದ ಭಕ್ತಜನರ ಸಂತಾಪವನ್ನು ನೀಗಿ ತಂಪೊದಗಿಸುವ ಮಹಾನುಭಾವನೆ, ನಂಬಿದವರನ್ನು ಎಂದೂ ಕೈಬಿಡದ ಸ್ಥಿರಸಂಕಲ್ಪದ ಗೋಪೀಜನರೊಡೆಯಾ, ನನ್ನನ್ನು ರಕ್ಷಿಸು. ಈ ಕಾರ್ಯಕ್ಕೆ ನಿನ್ನನ್ನು ಹೊರತು ಬೇರೆ ಯಾರನ್ನೂ ನಾನು ಕಾಣೆ.

ಭಕ್ತಾಪಾಯಭುಜಂಗಗಾರುಡಮಣಿಃ, ತ್ರೈಲೋಕ್ಯರಕ್ಷಾಮಣಿಃ
ಗೋಪೀಲೋಚನಚಾತಕಾಂಬುದಮಣಿಃ ಸೌಂದರ್ಯಮುದ್ರಾಮಣಿಃ
ಯಃ ಕಾಂತಾಮಣಿರುಕ್ಮಿಣೀ ಘನಕುಚದ್ವಂದ್ವೈಕಭೂಷಾಮಣಿಃ
ಶ್ರೇಯೋ ದೇವಶಿಖಾಮಣಿಃ ದಿಶತು ನೋ ಗೋಪಾಲಚೂಡಾಮಣಿಃ
॥ ೨೨ ॥

ಭಕ್ತರಿಗುಂಟಾದ ಅಪಾಯಗಳೆಂಬ ಸರ್ಪಗಳಿಗೆ ಗರುಡಮಣಿಯಂತಹನೂ ಮೂರುಲೋಕದ ರಕ್ಷಣೆಗಾಗಿ ಹೃದಯಕ್ಕೆ ಕಟ್ಟಿದ ರಕ್ಷಾಮಣಿಯಂತಹನೂ, ಗೋಪಿಯರ ಕಣ್ಣುಗಳೆಂಬ ಚಾತಕಪಕ್ಷಿಗಳಿಗೆ ಮೇಘಮಣಿಯಂತಹನೂ, ಸೌಂದರ್ಯವನ್ನೆಲ್ಲಾ ಒಂದೆಡೆಸೇರಿಸಿ 'ಇದೆ ಎಲ್ಲೆ' ಯೆಂಬಂತೆ ಮುದ್ರಿಸಿಟ್ಟ ರೀತಿ ತೋರುವ (ದಿವ್ಯಮಂಗಳವಿಗ್ರಹದ) ಮುದ್ರಾಮಣಿಯಂತಹನೂ, ಕಾಂತಾಮಣಿಯಾದ ರುಕ್ಮಿಣೀದೇವಿಯ ಘನಕುಚಮಂಡಲದ್ವಿತಯಕ್ಕೆ ಸರ್ವೋತ್ತಮವಾದ ಆಭರಣ ಮಣಿಯಂತಹನೂ, ದೇವತೆಗಳಿಗೆಲ್ಲಾ ಚೂಡಾಮಣಿಯಂತಹನೂ ಆದ ಗೋಪಾಲ ಶಿಖಾಮಣಿಯು ನಮಗೆ ಶ್ರೇಯಸ್ಸನ್ನು ಕೊಡಲಿ.

ಶತ್ರುಚ್ಛೇದೈಕಮಂತ್ರಂ, ಸಕಲಮುಪನಿಷದ್ವಾಕ್ಯ ಸಂಪೂಜ್ಯ
ಮಂತ್ರಂ,
ಸಂಸಾರೋತ್ತಾರಮಂತ್ರಂ, ಸಮುಪಚಿತ ತಮಃಸಂಘನಿರ್ಯಾಣಮಂತ್ರಂ,
ಸರ್ವೈಶ್ವರ್ಯೈಕಮಂತ್ರಂ, ವ್ಯಸನಭುಜಗ ಸಂದಷ್ಟ ಸಂತ್ರಾಣಮಂತ್ರಂ,
ಜಿಹ್ವೇ, ಶ್ರೀಕೃಷ್ಣಮಂತ್ರಂ ಜಪ ಜಪ ಸತತಂ ಜನ್ಮಸಾಫಲ್ಯ
ಮಂತ್ರಂ ॥ ೨೩ ॥

ಎಲೈ ನಾಲಗೆಯೇ! ಹೊರಗೊಳಗಿನ ಸಮಸ್ತ ಶತ್ರುಗಳನ್ನೂ ನಿಗ್ರಹಿಸಬಲ್ಲ ಒಂದೇ ಒಂದು ಮಂತ್ರವುಂಟು! ಅದು ಉಪನಿಷದ್ವಾಕ್ಯಗಳೆಲ್ಲವೂ ಏಕಕಂಠತೆಯಿಂದ ಗೌರವಿಸಿ ಸೂಚಿಸುವ ಸಕಲಮಂತ್ರವಾಗಿದೆ. ಸಂಸಾರಸಾಗರವನ್ನು ಶ್ರಮವಿಲ್ಲದಂತೆ ಸುಲಭವಾಗಿ ದಾಟಿಸಬಲ್ಲ ದಿವ್ಯಮಂತ್ರವೂ ಅದೇ. ಅಷ್ಟೇ ಅಲ್ಲ! ಅನಾದಿಕಾಲದಿಂದ ಅನುಸರಿಸಿಬಂದ ತಮಸ್ಸಿನ ಸಮೂಹಕ್ಕೆ ಅದು ನಿರ್ಗಮನ ಮಂತ್ರವೂ ಆಗಿದೆ. ಹೆಚ್ಚೇನು? ಸರ್ವೈಶ್ವರ್ಯವನ್ನೂ ಸಾಧಿಸಿಕೊಡಬಲ್ಲ ಸರ್ವಮಂತ್ರವೂ ವ್ಯಸನವೆಂಬ ಸರ್ಪದಿಂದ ಕಚ್ಚಲ್ಪಟ್ಟವರನ್ನು ಉದ್ಧರಿಸಬಲ್ಲ ಶುಭಮಂತ್ರವೂ, ಜನ್ಮವನ್ನು

ಸಾರ್ಥಕವಮಾಡುವಂತಹ ಸಫಲಮಂತ್ರವೂ ಆ ಮಂತ್ರವೇ ಆಗಿದೆ. (ಅದಾವುದೆನ್ನು ವೆಯೋ?) ಅದು ಶ್ರೀಕೃಷ್ಣಮಂತ್ರವು, ಅದನ್ನು ಯಾವಾಗಲೂ ಜಪಿಸು, ಜಪಿಸು.

ವ್ಯಾಮೋಹಪ್ರಶಮೌಷಧಂ, ಮುನಿಮನೋವೃತ್ತಿಪ್ರವೃತ್ತ್ಯೌಷಧಂ,
ದೈತ್ಯೇಂದ್ರಾರ್ತಿಹರೌಷಧಂ, ತ್ರಿಭುವನೇ ಸಂಜೀವನೈಕೌಷಧಂ,
ಭಕ್ತಾತ್ಯಂತ ಹಿತೌಷಧಂ, ಭವಭಯಪ್ರಧ್ವಂಸನೈಕೌಷಧಂ,
ಶ್ರೇಯಃಪ್ರಾಪ್ತಿಕರೌಷಧಂ, ಪಿಬ ಮನಃ, ಶ್ರೀಕೃಷ್ಣದಿವ್ಯೌಷಧಂ || ೨೪ ||

ಓ ಮನಸ್ಸೇ! ಲೋಕದಲ್ಲಿ ಸಕಲೋಪದ್ರವಗಳನ್ನೂ ಶಮನಮಾಡಬಲ್ಲ ಒಂದು ಸಿದ್ಧೌಷಧವಿದೆ. (ಅದು ಪರಮರಹಸ್ಯವಾದ ದಿವ್ಯೌಷಧ) ಮುನಿಗಳ ಮನಸ್ಸಿಗೆ ಅದು ಮನನಶೀಲತೆಯನ್ನುಂಟುಮಾಡುವ ಔಷಧ. (ಉದ್ಧತರಾದ) ದೈತ್ಯಪತಿಗಳಿಗೆ ದೈನ್ಯವನ್ನೊದಗಿಸಬಲ್ಲ ದಮನೌಷಧವೂ ಅದೇ. ಆ ಮಹೌಷಧವು ತ್ರಿಭುವನವನ್ನೂ ಉಜ್ಜೀವನಗೊಳಿಸಬಲ್ಲ ಸಂಜೀವನೌಷಧವೂ ಆಗಿದೆ. ಭಕ್ತನಾದ ವನಿಗೆ ಪರಮಹಿತಕರವಾದ ವಿಹಿತೌಷಧವೂ, ಸಂಸಾರಭಯವನ್ನು ನಿರ್ಮೂಲ ಗೊಳಿಸತಕ್ಕ ಏಕೌಷಧವೂ, ಶ್ರೇಯಸ್ಸನ್ನು ಶೀಘ್ರವಾಗಿ ಒದಗಿಸಬಲ್ಲ ಪರಮೌಷಧವೂ ಆದ ಆ ಶ್ರೀಕೃಷ್ಣನೆಂಬ ದಿವ್ಯೌಷಧವನ್ನು ಸೇವಿಸು.

ಆಮ್ನಾಯಾಭ್ಯಸನಾನಿ–ಅರಣ್ಯರುದಿತಂ, ವೇದವ್ರತಾನಿ–ಅನ್ವಹಂ
ಮೇದಶ್ಛೇದಫಲಾನಿ, ಪೂರ್ತವಿಧಯಃ ಸರ್ವೇ ಹುತಂ ಭಸ್ಮನಿ,
ತೀರ್ಥಾನಾಮವಗಾಹನಾನಿ ಗಜಸ್ನಾನಂ, ವಿನಾ ಯತ್ಪದ
ದ್ವಂದ್ವಾಂಭೋರುಹಸಂಸ್ಮೃತಿಂ ವಿಜಯತೇ ದೇವಃ ಸ ನಾರಾಯಣಃ
|| ೨೫ ||

ಯಾವ ಮಹಾಮಹಿಮನ ದಿವ್ಯಪಾದಾರವಿಂದದ್ವಂದ್ವದ ಸ್ಮರಣೆಯಿಲ್ಲದಂತೆ ಮಾಡುವ ವೇದಾಭ್ಯಾಸಗಳು ಅರಣ್ಯರೋದನದಂತೆಯೂ, ವೇದವ್ರತನಿಯಮಾದಿಗಳು ಬುದ್ಧಿಕ್ಲೇಶಮಾತ್ರಫಲಗಳಂತೆಯೂ, ಹೋಮಹವನಗಳು ಬೂದಿಯಲ್ಲಿ ಮಾಡಿದ ಹೋಮಗಳಂತೆಯೂ ಪುಣ್ಯತೀರ್ಥಗಳಲ್ಲಿ ಮಾಡುವ ಮಜ್ಜನವು ಆನೆಗಳನ್ನು ಅಲುಬಿದಂತೆಯೂ ಆಗಿ ವ್ಯರ್ಥವೆನಿಸುವುವೋ ಅಂತಹ ಪರಮಪ್ರಭುವಾದ ನಾರಾಯಣನು ಸರ್ವೋತ್ಕೃಷ್ಟನಾಗಿರುವನು.

ಶ್ರೀಮನ್ನಾಮ ಪ್ರೋಚ್ಯ ನಾರಾಯಣಾಖ್ಯಂ
ಕೇನಾಪ್ರಾಪ್ತಂ ವಾಂಛಿತಂ ಪಾಪಿನಾಪಿ?
ಹಾ! ನಃ ಪೂರ್ವಂ ವಾಕ್ಪ್ರವೃತ್ತಾ ನ ತಸ್ಮಿ೯
ತೇನ ಪ್ರಾಪ್ತಂ ಗರ್ಭವಾಸಾದಿ ದುಃಖಂ ॥ ೨೬ ॥

ಪಾಪಿಷ್ಠನೇ ಆಗಿದ್ದರೂ ಲೋಕದಲ್ಲಿ 'ನಾರಾಯಣ' ಎಂಬ ಶ್ರೀಮನ್ನಾಮವನ್ನು ಉಚ್ಚರಿಸಿದ ಯಾವನಿಗೆ ತಾನೆ ಇಷ್ಟಸಿದ್ಧಿಯುಂಟಾಗಿಲ್ಲ? ಅಯ್ಯೋ! ನಮ್ಮ ವಾಕ್ಕು ಹಿಂದೆ ಅದರಲ್ಲಿ ತೊಡಗಲಿಲ್ಲ. ಅದರಿಂದಲೇ ಗರ್ಭವಾಸವೇ ಮೊದಲಾದ ದುಃಖವೆಲ್ಲವೂ ನಮಗೆ ಒದಗಿದುದು!

ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ!
ಮತ್ಪ್ರಾರ್ಥನೀಯ ಮದನುಗ್ರಹ ಏಷ ಏವ
ತ್ವದ್ಭೃತ್ಯಭೃತ್ಯಪರಿಚಾರಕಭೃತ್ಯಭೃತ್ಯ
ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ ॥ ೨೭ ॥

ಎಲೈ ಮಧುಕೈಟಭಾರಿಯೇ, ನಾನು ಜನ್ಮವೆತ್ತಿದುದಕ್ಕೆ ಆಗಬೇಕಾದ ಫಲವಿದೊಂದು. ನಾನು ನಿನ್ನನ್ನು ಬೇಡತಕ್ಕುದೂ ನನಗೆ ನೀನು ಅನುಗ್ರಹಿಸಬೇಕಾಗಿರುವುದೂ ಇದೊಂದು ಮಾತ್ರ:—ಲೋಕನಾಥ! ನಿನ್ನ ಭೃತ್ಯನ ಭೃತ್ಯನ ಪರಿಚಾರಕನಾದವನ ಭೃತ್ಯನ ಸೇವಕನ ಸೇವಕನ ಸೇವಕನನ್ನಾಗಿ ನನ್ನನ್ನು ಎಣಿಸು.

ನಾಥೇ ನಃ ಪುರುಷೋತ್ತಮೇ ತ್ರಿಜಗತಾಮೇಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಸುರೇ ನಾರಾಯಣೇ ತಿಷ್ಠತಿ
ಯಂ ಕಂಚಿತ್ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ ನರಮಹೋ ಮೂಢಾ ವರಾಕಾ ವಯಂ
॥ ೨೮ ॥

ಅಯ್ಯೋ! ನಾವು ಎಂತಹ ಮೂಢರು? ಎಂತಹ ಅಲ್ಪರು? ಪುರುಷೋತ್ತಮನಾಗಿಯೂ ಮೂರುಲೋಕಗಳಿಗೂ ಏಕಾಧಿಪತಿಯಾಗಿಯೂ ಮನಸ್ಸಿನಿಂದ ನೆನೆದಮಾತ್ರದಲ್ಲಿ ತನ್ನ ದಿವ್ಯಪದವಿಯನ್ನುಕೂಡ ಅನುಗ್ರಹಿಸಲಿರುವ ದೇವದೇವ

ನಾಗಿಯೂ ಪ್ರಸಿದ್ಧನಾದ ನಾರಾಯಣನು ಇರುವಲ್ಲಿ—ಒಂದೆರಡು ಗ್ರಾಮಗಳಿಗೆ ಒಡೆಯನೂ ಅಲ್ಪ ಫಲಗಳನ್ನು ಮಾತ್ರ ಕೊಡಬಲ್ಲವನೂ ಹುಲುಮಾನವನೂ ಆದ ಯಾವನೋ ಒಬ್ಬ ಪುರುಷಾಧಮನನ್ನು ಸೇವಿಸಲಿಕ್ಕಾಗಿ ಹಾತೊರೆದು ಹುಡುಕುವೆ ವಲ್ಲ! ಆಶ್ಚರ್ಯ!! ಆಶ್ಚರ್ಯ!!!

ಮದನ, ಪರಿಹರ, ಸ್ಥಿತಿಂ ಮದೀಯೇ
ಮನಸಿ ಮುಕುಂದ ಪದಾರವಿಂದಧಾಮ್ನಿ
ಹರನಯನ ಕೃಶಾನುನಾ ಕೃಶೋಽಸಿ
ಸ್ಮರಸಿ ನ ಚಕ್ರಪರಾಕ್ರಮಂ ಮುರಾರೇಃ ‖ ೨೯ ‖

ಎಲೈ ಮನ್ಮಥನೆ! ಮುಕುಂದನ ಪಾದಾರವಿಂದಕ್ಕೆ ನೆಲೆಯಾದ ಈ ನನ್ನ ಮನಸ್ಸಿನಿಂದ ನಿನ್ನ ಬಿಡಾರವನ್ನು ತೆಗೆ. ಜೋಕೆ! ನೀನು ಮೊದಲೇ ರುದ್ರನ ಹಣೆಗಣ್ಣಿನುರಿಯಿಂದ ಉರಿದು ಕೃಶನಾಗಿರುವೆ. ಮುರಹರನ ದಿವ್ಯಚಕ್ರದ ಪರಾಕ್ರಮದ ನೆನಪು ನಿನಗಿಲ್ಲವೇನು?

ತತ್ತ್ವಂ ಬ್ರುವಾಣಾನಿ ಪರಂ ಪರಸ್ಮಾತ್
ಮಧು ಕ್ಷರಂತೀವ ಸತಾಂ ಫಲಾನಿ
ಪ್ರಾವರ್ತಯ ಪ್ರಾಂಜಲಿರಸ್ಮಿ ಜಿಹ್ವೇ!
ನಾಮಾನಿ ನಾರಾಯಣಗೋಚರಾಣಿ ‖ ೩೦ ‖

ಎಲೈ ಎನ್ನನಾಲಗೆಯೇ! ನಿನ್ನನ್ನು ಕೈಜೋಡಿಸಿ ಬೇಡಿಕೊಳ್ಳುತ್ತೇನೆ. ಸತ್ಪುರುಷರಿಗೆ ಮಧುವನ್ನು ಸೂಸುವ ದಿವ್ಯ ಫಲಗಳಂತಿರುವ ನಾರಾಯಣನ ನಾಮಗಳು ಗೋಚರಿಸುವಂತೆ ಆವರ್ತಿಸು. (ಸಂಕೀರ್ತನೆ ಮಾಡು)

ಇದಂ ಶರೀರಂ ಪರಿಣಾಮಪೇಶಲಂ
ಪತತ್ಯವಶ್ಯಂ ಶ್ಲಥಸಂಧಿ ಜರ್ಝರಂ
ಕಿಮೌಷಧೈಃ ಕ್ಲಿಶ್ಯಸಿ ಮೂಢ! ದುರ್ಮತೇ!
ನಿರಾಮಯಂ ಕೃಷ್ಣರಸಾಯನಂ ಪಿಬ ‖ ೩೧ ‖

ಎಲೈ ತಿಳಿಗೇಡಿಯಾದ ಮಂದಬುದ್ಧಿಯ ಮಾನವನೆ! ಈ ಶರೀರವು ಎಂದಿದ್ದರೂ ನಶ್ವರವು. ಸಂಧಿಬಂಧಗಳು ಶಿಥಿಲವಾಗಿ ಜರ್ಝರಿತವಾಗಿ ಎಂದಿದ್ದರೂ ಕಡ್ಡಾಯವಾಗಿ ಬಿದ್ದುಹೋಗತಕ್ಕುದು. ಹೀಗಿರುವಾಗ ಸುಮ್ಮನೆ ಔಷಧಿಗಳಿಂದ ಏಕೆ ಕ್ಲೇಶಗೊಳ್ಳುತ್ತೀಯೆ? ನಿನ್ನನ್ನು (ಎಂದೆಂದೂ) ರೋಗವಿಲ್ಲದವನನ್ನಾಗಿ ಮಾಡತಕ್ಕ ಕೃಷ್ಣರಸಾಯನವನ್ನು ಸೇವಿಸು.

ದಾರಾ ವಾರಾಕರವರಸುತಾ ತೇ, ತನೂಜೋ ವಿರಿಂಚಿಃ,
ಸ್ತೋತಾ ವೇದಸ್ತವ, ಸುರಗಣೋ ಭೃತ್ಯವರ್ಗಃ, ಪ್ರಸಾದಃ
ಮುಕ್ತಿಃ, ಮಾಯಾ ಜಗದವಿಕಲಂ ತಾವಕೀ, ದೇವಕೀ ತೇ
ಮಾತಾ, ಮಿತ್ರಂ ಬಲರಿಪುಸುತಃ; ತ್ವಯ್ಯತೋಽನ್ಯಂ ನಜಾನೇ ॥ ೩೨ ॥

ಪ್ರಭುವೆ, (ನಿನ್ನ ವಿಚಾರದಲ್ಲಿ ನಾನು ತಿಳಿದಿರುವುದು ಇಷ್ಟುಮಾತ್ರ) ನಿನ ಪ್ರಿಯಪತ್ನಿಯು (ನಿಖಿಲ ಜಗನ್ಮಂಗಳ ಸ್ವರೂಪಿಣಿಯಾದ) ಸಮುದ್ರರಾಜನ ಮಗಳು ಶ್ರೀದೇವಿಯು, ನಿನ್ನ ಪುತ್ರನು (ಸಮಸ್ತಜಗತ್ತಿನ ಸೃಷ್ಟಿಯಲ್ಲಿ ನಿರತನಾದ) ಬ್ರಹ್ಮ ದೇವನು, ವೇದಪುರುಷನೋ ನಿನ್ನ ಸ್ತೋತ್ರದಲ್ಲಿ ನಿರತನಾದವನು, ಸಮಸ್ತ ದೇವ ಗಣವೂ ನಿನ್ನ ಸೇವಕವರ್ಗಕ್ಕೆ ಸೇರಿದುದು, ನಿನ್ನ ಅನುಗ್ರಹವಾದರೋ ಪರಮ ಪುರುಷಾರ್ಥವಾದ ಮುಕ್ತಿಯು! ಅಖಂಡಜಗತ್ತೂ ನಿನ್ನ ಮಾಯೆಯೆನಿಸಿದೆ. ಭಕ್ತಪರಾಧೀನನೂ, ಅರ್ಥಿಕಲ್ಪಕನೂ, ಆಶ್ರಿತವಾತ್ಸಲ್ಯೈಕಜಲನಿಧಿಯೂ ಆಗಿ ಅವತರಿಸಿದ) ನಿನಗೆ ದೇವಕೀದೇವಿ ತಾಯಾದವಳು. (ಭಜನಶೀಲತೆಯಿಂದಲೂ ನಿನ್ನ ಸೌಶೀಲ್ಯದಿಂದಲೂ) ಇಂದ್ರಪುತ್ರನಾದ ಅರ್ಜುನನು ನಿನ್ನ ಗೆಳೆಯನಾಗಿ ಆರಿಸಲ್ಪಟ್ಟವನು. ನಿನ್ನ ವಿಷಯವಾಗಿ ನಾನು ಬೇರೆ ಏನನ್ನೂ ಅರಿಯೆ (ಮತ್ತೆ ಏನನ್ನು ಅರಿಯಬೇಕಾಗಿದೆ?)

ಕೃಷ್ಣೋ ರಕ್ಷತು ನೋ ಜಗತ್ತ್ರಯಗುರುಃ, ಕೃಷ್ಣಂ
ನಮಸ್ಯಾಮ್ಯಹಂ,
ಕೃಷ್ಣೇನಾಮರಶತ್ರವೋ ವಿನಿಹತಾಃ, ಕೃಷ್ಣಾಯ ತಸ್ಮೈ ನಮಃ,
ಕೃಷ್ಣಾದೇವ ಸಮುತ್ಥಿತಂ ಜಗದಿದಂ, ಕೃಷ್ಣಸ್ಯ ದಾಸೋಽಸ್ಮ್ಯಹಂ,
ಕೃಷ್ಣೇ ತಿಷ್ಠತಿ ವಿಶ್ವಮೇತದಖಿಲಂ, ಶ್ರೀಕೃಷ್ಣ ರಕ್ಷಸ್ವ ಮಾಂ ॥ ೩೩ ॥

ಜಗತ್ತ್ರಯ ಗುರುವಾದ ಶ್ರೀ ಕೃಷ್ಣನು ನಮ್ಮನ್ನು ಕಾಪಾಡಲಿ. ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ. ಶ್ರೀ ಕೃಷ್ಣನಿಂದ ಅಮರ ಶತ್ರುಗಳು ನಾಶಹೊಂದಿದರು.

ಆ ಶ್ರೀಕೃಷ್ಣನಿಗೆ ನಮಸ್ಕಾರವು. ಈ ಜಗತ್ತು ಶ್ರೀಕೃಷ್ಣನ ದೆಸೆಯಿಂದಲೇ ಉದ್ಭವಿಸಿತು. ಶ್ರೀಕೃಷ್ಣನ ದಾಸ ನಾನು. ಈ ಸಮಸ್ತವಿಶ್ವವೂ ಶ್ರೀಕೃಷ್ಣನಲ್ಲಿಯೇ ನಿಂತಿದೆ. ಎಲೈ ಶ್ರೀಕೃಷ್ಣನೆ, ನನ್ನನ್ನು ರಕ್ಷಿಸಪ್ಪ.

ತತ್ತ್ವಂ ಪ್ರಸೀದ ಭಗವನ್! ಕುರು ಮಯ್ಯನಾಥೇ
ವಿಷ್ಣೋ! ಕೃಪಾಂ; ಪರಮಕಾರುಣಿಕಃ ಕಿಲ ತ್ವಂ
ಸಂಸಾರಸಾಗರ ನಿಮಗ್ನಮನಂತ, ದೀನಂ
ಉದ್ಧರ್ತುಮರ್ಹಸಿ ಹರೇ, ಪುರುಷೋತ್ತಮೋಽಸಿ ॥ ೩೪ ॥

ಭಗವನ್, ಸರ್ವವ್ಯಾಪಕ, ಪ್ರಸನ್ನನಾಗು. ಅನಾಥನಾದ ನನ್ನಲ್ಲಿ ದಯೆಯನ್ನು ತೋರು. ನೀನು ಪರಮಕಾರುಣಿಕನಲ್ಲವೆ? ಸಂಸಾರಸಾಗರದಲ್ಲಿ ಮುಳುಗಿ ತೊಳಲುತ್ತಿರುವ ಈ ದೀನನನ್ನು ಉದ್ಧರಿಸಲು ನೀನು ಅರ್ಹನಾಗಿರುವೆ. ಪುರುಷೋತ್ತಮನೆನಿಸಿರುವೆ. (ಮತ್ತೆ ಯಾರು ನನ್ನನ್ನು ಉದ್ಧರಿಸಬಲ್ಲರು?)

ನಮಾಮಿ ನಾರಾಯಣ ಪಾದಪಂಕಜಂ,
ಕರೋಮಿ ನಾರಾಯಣಪೂಜನಂ ಸದಾ,
ವದಾಮಿ ನಾರಾಯಣನಾಮ ನಿರ್ಮಲಂ,
ಸ್ಮರಾಮಿ ನಾರಾಯಣ ತತ್ತ್ವಮವ್ಯಯಂ ॥ ೩೫ ॥

ನಾನು ಯಾವಾಗಲೂ ನಾರಾಯಣನ ಪಾದಪದ್ಮಕ್ಕೆ ನಮಸ್ಕರಿಸುತ್ತೇನೆ. ನಾರಾಯಣನ ಪಾದಪೂಜನವನ್ನು ಮಾಡುತ್ತೇನೆ. ನಾನು ಯಾವಾಗಲೂ ಉಚ್ಚರಿಸುವುದು ನಾರಾಯಣನ ದಿವ್ಯನಿರ್ಮಲ ನಾಮವನ್ನು; ಸ್ಮರಣೆ ಮಾಡುವುದು ಶಾಶ್ವತವಾದ ನಾರಾಯಣನ ತತ್ತ್ವವನ್ನು.

ಶ್ರೀನಾಥ, ನಾರಾಯಣ, ವಾಸುದೇವ,
ಶ್ರೀಕೃಷ್ಣ, ಭಕ್ತಪ್ರಿಯ, ಚಕ್ರಪಾಣೇ,
ಶ್ರೀಪದ್ಮನಾಭಾಚ್ಯುತ, ಕೈಟಭಾರೇ,
ಶ್ರೀರಾಮ, ಪದ್ಮಾಕ್ಷ, ಹರೇ, ಮುರಾರೇ ॥ ೩೬ ॥

ಅನಂತ, ವೈಕುಂಠ, ಮುಕುಂದ, ಕೃಷ್ಣ,
ಗೋವಿಂದ, ದಾಮೋದರ, ಮಾಧವೇತಿ
ವಕ್ತುಂ ಸಮರ್ಥೋಽಪಿ ನವಕ್ತಿ ಕಶ್ಚಿತ್
ಅಹೋ ಜನಾನಾಂ ವ್ಯಸನಾಭಿಮುಖ್ಯಂ ! || ೩೭ ||

ಶ್ರೀನಾಥ, ನಾರಾಯಣ, ವಾಸುದೇವ, ಶ್ರೀಕೃಷ್ಣ, ಭಕ್ತಪ್ರಿಯ, ಚಕ್ರಪಾಣೀ, ಶ್ರೀಪದ್ಮನಾಭ, ಅಚ್ಯುತ, ಕೈಟಭಾರೀ, ಶ್ರೀರಾಮ, ಪದ್ಮಾಕ್ಷ, ಹರೇ ಮುರಾರೇ, ಅನಂತ, ವೈಕುಂಠ, ಮುಕುಂದ, ಕೃಷ್ಣ ಗೋವಿಂದ, ದಾಮೋದರ, ಮಾಧವಾ,—ಹೀಗೆಂಬುದಾಗಿ ನಾಲಗೆಯಲ್ಲಿ ನುಡಿಯುವ ಸಾಮರ್ಥ್ಯವಿದ್ದರೂ ಒಬ್ಬೊಬ್ಬರು (ಯಾವನೊಬ್ಬನೂ) ನುಡಿಯುವುದಿಲ್ಲ. ಅಹಹ! ಲೋಕದಲ್ಲಿ ಜನರು ದುರ್ವ್ಯಸನಗಳ ಕಡೆಗೆ ಎಷ್ಟುಮಟ್ಟಿಗೆ ತಿರುಗಿದ್ದಾರೆಂಬುದು ಆಶ್ಚರ್ಯಕರವಾಗಿದೆ!

ಧ್ಯಾಯಂತಿ ಯೇ ವಿಷ್ಣುಮನಂತಮವ್ಯಯಂ
ಹೃತ್ಪದ್ಮಮಧ್ಯೇ ಸತತಂ ವ್ಯವಸ್ಥಿತಂ
ಸಮಾಹಿತಾನಾಂ ಸತತಾಭಯಪ್ರದಂ
ತೇ ಯಾಂತಿ ಸಿದ್ಧಿಂ ಪರಮಾಂ ಚ ವೈಷ್ಣವೀಂ || ೩೮ ||

ಸರ್ವವ್ಯಾಪಿಯೂ, ಅನಂತನೂ, ವಿಕಾರರಹಿತನೂ, ಸಕಲರ ಹೃದಯಪದ್ಮದಲ್ಲಿಯೂ ನಿರಂತರವಾಗಿ ನೆಲಸಿರುವವನೂ, ಆಶ್ರಿತರಿಗೆ ಯಾವಾಗಲೂ ಅಭಯಪ್ರದನೂ ಆಗಿರುವ ಆ ಭಗವಂತನನ್ನು ಯಾರು ಧ್ಯಾನಮಾಡುತ್ತಾರೋ ಅಂತಹವರು ಉತ್ತಮೋತ್ತಮವಾದ ವೈಷ್ಣವೀಸಿದ್ಧಿಯನ್ನು ಪಡೆಯುವರು.

ಕ್ಷೀರಸಾಗರ ತರಂಗ ಶೀಕರಾ
ಸಾರ ತಾರಕಿತ ಚಾರುಮೂರ್ತಯೇ
ಭೋಗಿ ಭೋಗ ಶಯನೀಯ ಶಾಯಿನೇ
ಮಾಧವಾಯ ಮಧುವಿದ್ವಿಷೇ ನಮಃ || ೩೯ ||

ಗಗನನೀಲವಾದ ಯಾವನ ದಿವ್ಯಮೂರ್ತಿಯ ಮೇಲೆ ಕ್ಷೀರಸಾಗರದ ಅಲೆಗಳಿಂದ ತುಂತುರುಹನಿಗಳು ಹಾರಿಬಂದು ಕುಳಿತು ನಕ್ಷತ್ರಗಳಂತೆ ಮನೋಹರವಾಗಿ ಕಂಗೊಳಿಸುವುವೋ ಯಾವನು ಮಹಾಶೇಷನ ದಿವ್ಯಶರೀರದ ಮೃದುವಾದ ಹಾಸಿಗೆಯ ಮೇಲೆ ಪವಡಿಸಿ ಆನಂದಮಯನಾಗಿರುವನೋ ಆ ಮಧುಸೂದನನಾದ ಮಾಧವನಿಗೆ ನಮಸ್ಕಾರವು.

ಯಸ್ಯ ಪ್ರಿಯೌ ಶ್ರುತಿಧರೌ ಕವಿಲೋಕವೀರೌ
ಮಿತ್ರೇದ್ವಿಜನ್ಮವರಪದ್ಮಶರಾವಭೂತಾಂ
ತೇನಾಂಬುಜಾಕ್ಷ ಚರಣಾಂಬುಜ ಷಟ್ಪದೇನ
ರಾಜ್ಞಾ ಕೃತಾ ಕೃತಿರಿಯಂ ಕುಲಶೇಖರೇಣ || ೪೦ ||

ಕವಿಗಳೂ ಲೋಕವೀರರೂ ವೇದಪಾರಂಗತರೂ ಎನಿಸಿ ವಿಪ್ರಶ್ರೇಷ್ಠರಾದ ಪದ್ಮ, ಶರ ಎಂಬ ಇಬ್ಬರು ಮಹನೀಯರು ಯಾರಿಗೆ ಪ್ರಿಯಮಿತ್ರರೆನಿಸಿದರೋ ಅಂತಹ ಶ್ರೀ ಪುಂಡರೀಕಾಕ್ಷಪಾದಪದ್ಮಭ್ರಮರನಾದ ಕುಲಶೇಖರರಾಜನಿಂದ ಈ ಕೃತಿಯು ರಚಿಸಲ್ಪಟ್ಟಿತು.

ಶ್ರೀ ಕುಲಶೇಖರಾಳ್ವಾರ್ ತಿರುವಡಿಗಳೇ ಶರಣಂ

ಶ್ರೀಃ

---

॥ ಶ್ರೀ ॥

# ಶ್ರೀ ಮುಕುಂದಮಾಲಾ

(ಕನ್ನಡ ಅನುವಾದ)

ಕಂ॥ ವಂದಿಸುವೆನಾರ ನಗರಿಯೊ
ಳೆಂದುಂ ಶ್ರೀರಂಗಯಾತ್ರೆಯುರುಸಡಗರವೇ
ಮುಂದಿಯು ದಿನದಿನದುಲಿಯೆನೆ
ಸಂದಿರ್ಪುದೊ ಆ ನರೇಂದ್ರ ಕುಲಶೇಖರನಂ.

ಸಿರಿಯೊಡೆಯನೇ ಎಂದು ವರದನೇ ಎಂದು ಕರುಣಾಳುವೇ
ಎಂದೆನುತ್ತೆ
ಭಕ್ತಪ್ರಿಯಾಯೆಂದು ಭಯನಿವಾರಣನಿಪುಣಯೆಂದು ನಾಥಾ ಎನುತ್ತ
ನಾಗಶಯನನೆಯೆಂದು ಲೋಕನಿಲಯನೆಯೆಂದು ಹಜ್ಜೆಹಜ್ಜೆಗೆ
ನಿನ್ನ ಹೆಸರನೆತ್ತಿ
ಕೊಂಡಾಡಿ ನಲಿದಾಡುವೀ ಭಾಗ್ಯಮಂ ನನಗೆ ಸಲಿಸು ಕೃಪೆಯಿಂ
ಮುಕುಂದಾ ॥ ೧ ॥

ಜಯಿಸಲಿ ಜಯಿಸಲಿ ಲೀಲೆಗೆ ದೇವಕಿನಂದನನಾದೀತಂ
ಜಯಿಸಲಿ ಜಯಿಸಲಿ ಕೃಷ್ಣಂ ವೃಷ್ಣಿಕುಲೋಜ್ವಲಶುಭದೀಪಂ
ಜಯಿಸಲಿ ಜಯಿಸಲಿ ಮುಗಿಲಿನ ಬಣ್ಣದನೀಲಿಮ ಕೋಮಲತನುವಾತಂ
ಜಯಿಸಲಿ ಜಯಿಸಲಿ ಧರಣಿಯ ಭಾರವ ಪರಿಹರಿಪ ಮುಕುಂದಂ ॥ ೨ ॥

ತಲೆಬಗ್ಗುತೆ ನಿನ್ನಡಿಯಲಿ ಕೆಡಹುತಲೀಯೊಡಲಂ
ಬೇಡುವೆನ್ನೈಯ ಮುಕುಂದನೆ ನಿನ್ನಂ ನಾನಿನಿತಂ
ನಿನ್ನಡಿದಾವರೆಯಂ ಮರೆಯದ ಚಿತ್ತದ ಹುರುಳೀ
ಭವಭವದೊಳಮೆನಗಾಗಲಿ ನಿನ್ನಹೆಸಾದದೊಳೀ ॥ ೩ ॥

ನಂದನದೊಳ್ ಚೆನ್ನೆಯರಾ ಮೆಲುಮೈಬಳ್ಳಿಯ ಕೂಟಕೆ
ದ್ವಂದ್ವಗಳಂ ಕುಂಭೀಪಾಕದ ಹಿರಿನರಕವ ಕಳೆಯಲ್
ನಿನ್ನಯ ಚೆನ್ನಡಿಯೆರಡಂ ವಂದಿಸೆನೊ ಮುಕುಂದಪ್ರಭು !
ನಿನ್ನನೆ ಎದೆವನೆಯಲಿ ಭಾವಿಸೆ ಬಯಸುವೆನಡಿಗಡಿಗಂ ‖ ೪ ‖

ಧರ್ಮದೊಳೆನಗಿಲ್ಲಾಸೆಯು ಧನದಲಿ ಬಯಕೆಯುಮಿಲ್ಲೈ
ಕಾಮದ ಭೋಗಕೆ ಕೋರೆನೊ ಕರ್ಮದಗತಿಯದು ಸಲ್ಲೈ
ಇನಿತೆನಗುತ್ಕಟದಿಚ್ಛೆಯ ಬೇಡಿಕೆ— ಜನಿಜನಿಯೊಳಗಂ
ನಿನ್ನಡಿಪಾವರೆಯಲ್ಲಿರಲೈ ಕದಲದ ಭಕ್ತಿಸೊಗಂ ‖ ೫ ‖

ಸುರರ ಪುರದೊಳೊ ಧರಣಿಯೊಳಗೋ
ದೊರತಿರಲಿಯೆನಗಂತೆ ವಾಸವು
ನರಕದೊಳಗಾದರು ಸರಿಯೆ ನರಕಾಂತಕನೆ ಮತ್ತೆ
ಶರದೃತುವ ತಾವರೆಯ ಸೊಬಗನು
ಮರೆಯಿಸುವ ನಿನ್ನಡಿಗಳೆರಡನು
ಮರಣವೊದಗಿದರೂ ಸರಿಯೆ ಚಿಂತಿಸುವ ಬಗೆ ಸಲ್ಲೈ ‖ ೬ ‖

ಕೃಷ್ಣ ! ನಿನ್ನಡಿಯ ತಾವರೆಯ ಪಂಜರದೊಳಗೆ
ಯೆನ್ನಮನದರಸಂಚೆಯಿಗಲೇ ಹೊಗಲೈ
ಪ್ರಾಣಪ್ರಯಾಣಸಮಯದೆ ವಾತ ಪಿತ್ತ ಕಫ
ವಾವರಿಸೆ ಕಂಠದೊಳು ನೆನಹಿಗೆಡೆಯುಂಟೇ ? ‖ ೭ ‖

ಚಿಂತಿಸುವೆಂ ಸಂತತಮುಂ, ಮೊಳೆನಗೆ ಮಿಸುಗುವ ಮೊಗದಾವರೆಯಾ
ಎನ್ನೆರೆಯಂ ಶ್ರೀಹರಿಯಂ, ಹಿರಿಯರ ಹಿರಿಯನನ್ ಅನುಭವರಸಿಕರ್
ನಾರದಮುಖ್ಯರ್ ಧೀರತಪಸ್ವಿಗಳೆಂದುಂ ವಂದಿಸಿ ನಲಿನಲಿವಾ
ನಂದಗೋಪಾಲನ ಕಂದನನಾ ಕನ್ನೈದಿಲಮೈವಣ್ಣದ ವಿಭುವಂ ‖ ೮ ‖

ಅಡಿಗಳುಂ ಕೈಗಳುಂ ತಾವರೆಗಳೆಂದೆನಲು
ಕಡುಹೊಳೆವ ಕಣ್ಗಳೇ ಸುಳಿವ ಮಿನುಗಳೆನಲ್
ನಿಡಿಯುವಹ ತೋಳುಗಳೆ ಅಲೆಗಳಂತಿರೆ ತೋರೆ ಬಳಲಿಕೆಯ
ಹೋಗೊಳಿಸುವಾ
ಬಿಡದಗಾಧವೆನಿಪ್ಪ ಹರಿಯೆಂಬ ಸರಸಿಯಲಿ
ಒಡನೆ ಮುಳುಗುತೆ ದಿವ್ಯಕಾಂತಿಯಾ ತಿಳಿನೀರ
ಕುಡಿದು ಭವಮರುಭೂಮಿಯಲಿದಾದ ಖೇದಮಂ
ಕಳೆವೆನೀಗಳಿಗೆಯಲ್ಲಿ ॥ ೯ ॥

ಸರಸಿಜಾಕ್ಷನ ಶಂಖಚಕ್ರದೊಡಗೂಡಿದಾ
ಮುರಹರನನನುಭವಿಸೆ ತಡೆಯದಿರು ಮನವೇ
ಹರಿಯ ಚರಣದ ನೆನಹಿನಮೃತಕ್ಕೆ ಸರಿಯೆನಿಪ
ಹಿರಿಯ ಸುಖಮಂ ಬೇರೆ ಕಾಣೆನೈಯೆಂದುಂ ॥ ೧೦ ॥

ಬಗೆಬಗೆಯಲಿ ಚಿಂತಿಸಿ ಯಮಲೋಕದ ಬಹುವಿಧಯಾತನೆಯಂ
ದಿನವೂ
ಬೆದರದಿರೈ ಪೊಳ್ಗೆದೆಯೇ! ಪಾಪದ ಹಗೆಗಳಿಗಿಲ್ಲಿಲ್ಲೊಡೆತನವು
ಪ್ರಭುವಲ್ಲವೆ ಶ್ರೀಧರನೆಮಗೊಲವಿಂ ಜಡತೆಯನುಳಿಯುತೆ ಭಜಿಸಲು
ಸುಲಭಂ
ನೆನೆ ನಾರಾಯಣನಂ; ಜಗದೆಡರಂ ಕಳೆವಂ ದಾಸನೊಳರಿಯದನೇ ॥ ೧೧ ॥

ದ್ವಂದ್ವಂಗಳ ಬಿರುಗಾಳಿಯ ಬಡಿತದ ಭವಜಲನಿಧಿಯೊಳ್
ಸತಿಸುತಸುತೆಯರ ಹೊರೆಯುವ ಹೊರೆಯಿಂ ಕುಸಿವವರಂ
ವಿಷಮೇಂದ್ರಿಯ ವಿಷಯಂಗಳ ನೀರೊಳ್ ಮುಳುಗಿದ ನರರಂ
ದಡಗಾಣಿಸಲೊಂದೇಗತಿ ಹರಿಯೆಂಬುವ ನಾವಂ ॥ ೧೨ ॥

ಕಟ್ಟಾಳದ ದುಸ್ತರವಹ ಸಂಸಾರಾಂಬುಧಿಯಂ
ದಾಟುವೆನೆಂತೆಂದೆಲೆ ಮನವೇ ದೀನತೆ ಬೇಡಯ್
ನರಕನಿವಾರಣಲೀಲೆಯ ಕಮಲಾಕ್ಷನೊಳಿಟ್ಟಾ
ಪರಭಕ್ತಿಯೆ ಕಡ್ಡಾಯದೆ ನಿನ್ನನು ದಾಟಿಪುದೈ ॥ ೧೩ ॥

ಆಸೆಯೇ ನೀರು, ಕಾಮದ ಗಾಳಿ ಚೋದಿಸಲು
ಮಾಸರಮೆನಲ್ಕೆದ್ದ ಮೋಹದೆತ್ತರದಲೆಯ
ರಾಶಿ, ಸತಿಯೆಂಬ ಸುಳಿ, ಸುತಸಹೋದರರೆಂಬ ಮೊಸಳೆಗಳ ಹಿಂಡು
ಕೂಡಿ
ಆಸುರಮೆನಿಪ್ಪ ಭವಜಲನಿಧಿಗೆ ಜಾರಿ ಬಿ
ದ್ದೀಸಲಾರದೆ ಮುಳುಗುತಿರುವೆಮಗೆ ನಿನ್ನಡಿಯ
ಶ್ರೀ ಸರೋಜದ ಭಕ್ತಿನಾವೆಯಂ ನೀಡೈಯ ಮೂರುನೆಲೆಯೊಡೆಯ
ವರದಾ ॥ ೧೪ ॥

ನೋಡಲಾರೆನ್ನೈ ನಿನ್ನ ಚರಣಕಮಲಭಕ್ತಿಯುಳಿದ
ಪುಣ್ಯಹೀನರಂ, ಕ್ಷಣವು
ಕೇಳಲಾರೆನ್ನೈ ನಿನ್ನ ದಿವ್ಯಚರಿತೆಯುಳಿದ ಕಟ್ಟುಕತೆಗಳೋಳಿಯಂ
ಪ್ರಭುವೆ !
ನೆನೆಯಲಾರೆನ್ನೈಯ ಭುವನಪತಿಯೆನಿಪ್ಪ ನಿನ್ನನೂ ಇಲ್ಲವೆಂದು
ನುಡಿವ ನರರ ! ಮಾಧವಾ
ಹುಟ್ಟಲಾರೆನ್ನೈಯ ನಿನ್ನ ಪೂಜೆಯೊಂದು ಭಾಗ್ಯವುಳಿದು
ಜನ್ಮಜನ್ಮಕೂ ದೇವ ॥ ೧೫ ॥

ಕೇಶವನಂ ಕೊಂಡಾಡೆಲೆ ನಾಲಗೆ, ಮುರಹರನಂ ಭಜಿಸೆಲೆ
ಮನವೇ ನೀಂ
ಕೈಯೆರಡೇ ಶ್ರೀಧರನಂ ಪೂಜಿಸಿ, ಕಿವಿಗಳೆ ಕೇಳಿರಿ ಮಾಧವ ಕಥೆಯಂ
ಕಣ್ಣೆರಡೇ ! ನೋಡಿರಿ ಸಿರಿಕೃಷ್ಣನ, ಹರಿನಿಲಯಕೆ ನಡೆಯಿರಿ
ಕಾಲ್ ಜೊತೆಯೇ
ನಾಸಿಕ, ಘ್ರಾಣಿಸು ಹರಿಪದ ತುಲಸಿಯನ್–ಎಲೆ ಶಿರವೇ
ನಮಿಸಚ್ಯುತನಂ ॥ ೧೬ ॥

ಕೇಳಿರಿ ಜನರೇ ! ಹುಟ್ಟಿನ ಸಾವಿನ ರೋಗಕೆ ಮಡಿವೆನು
ಮದ್ದೊಂದಂ
ಯೋಗದೆ ನುರಿತಾ ಯಾಜ್ಞವಲ್ಕ್ಯರೇ ಮುನ್ನಹ
ಮುನಿವರರುಸಿರಿದುದಂ
ಕುಡಿಯಿರಿ ಲೆಕ್ಕಿಸಲಾಗದ ಮಹಿಮೆಯು ಕೃಷ್ಣ ಎಂಬೊಂದಮೃತವನು
ಒಳಗಂ ಬೆಳಗುವ ದಿವ್ಯೌಷಧವದು ಕುಡಿದರೆ ತರುವುದು
ಬಿಡುಗಡೆಯಂ ॥ ೧೭ ॥

ಆಪದಂಗಳ ತೆರೆಯ ಸಾಲುತುಂಬಿದ ಭವದ ಕಡಲಲ್ಲಿ
ನೆರೆ ಹೊಕ್ಕು ನಿಂತ ನರರೇ
ಕೇಳಿರೈ ನಿಮಗಾಗಿ ಸಂಗ್ರಹಿಸಿ ನುಡಿಯುವೆನು
ಪರಮಹಿತವೊಂದನಿದನು
ತೊಲಗಿಸುತೆ ಹಲವು ಚಿಂತನೆಯ ಮನದಲಿ ನಮೋ ನಾರಾಯಣಾ
ಯೆಂಬ ಮಂತ್ರವಿದನು
ಪ್ರಣವದೊಡಗೂಡಿರಲು ನಮಿಸುತ್ತೆ ದೇವಂಗೆ ಜಪಿಸಿರೈ
ಮತ್ತೆ ಮತ್ತೆ ॥ ೧೮ ॥

ಆವುದಂ ಕಂಡೊಡನೆ ಪೃಥಿವಿ ಧೂಳಿನ ಕಣವೊ
ಜೀವನದ ರಾಶಿಯೆಲ್ಲೊಂದು ಜಲಬಿಂದುವೋ
ತೀವಿರ್ದ ತೇಜವೆಲ್ಲೊಂದು ಲಘುವಾದ ಕಿಡಿ, ಗಾಳಿಯೆಲ್ಲೊಂದು
ಸುಯಿಲೋ
ಆವರಿಸಿದಾಗಸವೆ ಕಿರುರಂಧ್ರವೋ ರುದ್ರ
ದೇವನುಂ ಬ್ರಹ್ಮನುಂ ಕ್ಷುದ್ರರೆನಿಪರೊ ಸಕಲ
ದೇವರುಂ ಹುಳುಗಳೆಣಿಕೆಯೊ ದೇವ ! ಅಂತಹುದು ನಿನ್ನವಧಿಯುರದ
ಹಿರಿಮೆ ॥ ೧೯ ॥

ಜೋಡಿಸಿದ ಕೈಗಳಿಂ ಬಾಗಿರ್ದ ತಲೆಯಿಂದೆ
ಕೂಡಿರ್ದ ರೋಮಾಂಚದವಯವಂಗಳಿನೊಲ್ದು
ಮೂಡಿರ್ದ ಗದ್ಗದಸ್ವರದ ಕೊರಳಿಂದೊಸರ್ವ ಸುಖಬಾಷ್ಪದಕ್ಷಿಯಿಂದೆ
ಕೂಡಿ ನಿನ್ನಡಿಮಲರ ನೆನಹಿನಮೃತದ ಸವಿಯ
ನೋಡಿ ನಲಿದಾಡಿ ನಿತ್ಯವು ಸುಖಿಪ ಭಾಗ್ಯವದು
ಕೂಡಿ ಬಂದೀನಮ್ಮ ಬಾಳು ಸತತವು ಸಾರ್ಥವೆನಿಸಲ್ಕೆ
ಕಮಲನಯನಾ ‖ ೨೦ ‖

ತುರುವಳನೆ, ಕರುಣಾಸಮುದ್ರನೆ,
ಸಿರಿಯ ನಲ್ಲನೆ, ಕಂಸಹರಣನೆ,
ಕರಿಪತಿಯ ಪೊರೆದನಘಕರುಣೆಯ ಸೀಮೆದೋರಿದನೇ
ಸರಸಿಜಾಕ್ಷನೆ, ಮೂರುಲೋಕದ
ಗುರುವೆ, ಹಲಧರನನುಜ, ಮಾಧವ,
ಪೊರೆವುದೈ ಗೋಪೀಜನಪ್ರಿಯ, **ನಿನ್ನನುಳಿದರಿಯೆಂ** ‖ ೨೧ ‖

ಭಕತಜನದೆಡರೆಂಬ ಸರ್ಪಕ್ಕೆ ಗರುಡಮಣಿ,
ಸಕಲಲೋಕದ ಕೇಡನೋಡಿಸುವ ರಕ್ಷೆಮಣಿ,
ನಿಖಿಲ ಗೋಪೀಜನದ ಲೋಚನದ ಚಾತಕಕೆ ಮಳೆಯಮಣಿ, ಚೆಲುವಿಗೆಲ್ಲ
ನಿಖರವಿದು ನೆಲೆಯೆನುತೆ ಭದ್ರಿಸಿದ ಮುದ್ರೆಮಣಿ,
ರುಕುಮಿಣಿಯ ಕುಚಯುಗಾಭರಣಮಣಿ, ಕೃಷ್ಣನೆಂ
ಬಕಳಂಕಸುರಶಿಖಾಮಣಿ, ನಮಗೆ ಶುಭಕೊಡಲಿ ಗೋವಳರ
ತಲೆಯ ಮಣಿಯು ‖ ೨೨ ‖

ಹಗೆಗಳಂ ಪರಿಹರಿಸಲೊಂದೆ ಮಂತ್ರಂ. ಸಕಲ
ನಿಗಮಾಂತ ವಚನ ಸಂಪೂಜ್ಯಮಂತ್ರಂ, ಭವದೊ
ಳಗಿವವರನುದ್ಧರಿಪ ಮಂತ್ರವೈ, ನೆರೆದ ತಮದೊಡ್ಡನೋಡಿಸುವ ಮಂತ್ರಂ
ಅಗಣಿತೈಶ್ವರ್ಯಮಂ ನೆರಹುವೊಂದೇ ಮಂತ್ರಂ
ಅಗಿವ ದುರ್ವ್ಯಸನಾಹಿ ವಿಷನಿವಾರಣ ಮಂತ್ರಂ
ಮಗುಮಗುಳೆ ಜಪಿಸೈಯ ನಾಲಗೆಯೆ ಬಾಳ್ ಸಫಲಮೆನಿಪುದೈ
ಕೃಷ್ಣಮಂತ್ರಂ ‖ ೨೩ ‖

ಮನದ ಮಬ್ಬಂ ಕಳೆಯೆ ದೊರೆಯಿಲ್ಲದೌಷಧಂ,
ಮುನಿಮನೋವೃತ್ತಿಯಂ ನೆರಹುವೊಂದೌಷಧಂ,
ದನುಜೇಂದ್ರಭಯುವಳಿಯುಲೌಷಧಂ, ಮೂಜಗಕೆ ಸಂಜೀವನೈಕೌಷಧಂ,
ವಿನತರಿಗೆ ಪರಮಹಿತದೌಷಧಂ, ಸಂಸಾರ
ಘನ ಭೀತಿಯಂ ಧ್ವಂಸಗೊಳಿಸುವೊಂದೌಷಧಂ,
ಮನವೆ! ಕುಡಿಕುಡಿ ಸಕಲ ಶ್ರೇಯಕ್ಕೆ ಕಾರಣಂ ಶ್ರೀಕೃಷ್ಣ
ದಿವ್ಯೌಷಧಂ ॥ ೨೪ ॥

ಆವನಡಿದಾವರೆಯ ನೆನಹುಳಿದು ನಡಸೆ ಶಾ
ಸ್ತ್ರಾವಳಿಗಳಭ್ಯಾಸವಡವಿಯಲಿ ರೋದನವೊ
ಆ ವಿವಿಧ ವೇದವ್ರತಂಗಳುಂ ಪ್ರತಿದಿನಂ ಮತಿವಿಕಾರಕೆ ನೆಪಗಳೋ
ಓವಿದಿಷ್ಟಾಪೂರ್ತವೆಲ್ಲ ಬೂದಿಯ ಹೋಮ
ವೋ ವಂದ್ಯ ಪುಣ್ಯತೀರ್ಥಂಗಳಾ ಸ್ನಾನಮುಂ
ಭಾವಿಸಲ್ಕಾನೆ ಮುಳುಗಿದ ತೆರವೊ ಗೆಲ್ವನಾ ನಮ್ಮ
ವಿಭು ನಾರಾಯಣಂ ॥ ೨೫ ॥

ನಾರಾಯಣಾ ಎಂಬ ಸಿರಿನಾಮವಂ ನುಡಿದು
ಬಯಕೆ ಸಲ್ಲದರಾರು ಪಾಪಿಯಾಗಿರೆಯುಂ?
ಅಕಟ! ನಮ್ಮಾ ಜಿಹ್ವೆ ಹಿಂದೆ ನುಡಿಯದೆ ಹೋಯ್ತು
ಬಂದಿತೀ ಗರ್ಭವಾಸಾದಿ ದುಃಖಂ ॥ ೨೬ ॥

ಎನ್ನ ಜನ್ಮಕೆ ಫಲವು ತಾನಿದುವೆ ಮಧುಕೈಟಭಾರಿಯೋ
ಲೋಕವಿಭುವೆ!
ನಿನ್ನ ನಾಂ ಬೇಡುವುದು ನೀನೆನಗನುಗ್ರಹಿಸಿ ಕೊಡಬೇಹುದಂತುಟಿದುವೇ
ನಿನ್ನ ಸೇವಕನ ಸೇವಕನ ಪರಿಚಾರಕನ ಸೇವಕನ ಸೇವಕನಿಗೆ
ಮನ್ನಣೆಯ ಸೇವಕನೆನಿಪ್ಪವನ ಸೇವಕನು ನಾನೆಂದು ನೆನೆಯೊ
ಪ್ರಭುವೇ ॥ ೨೭ ॥

ಮೂರುಲೋಕಕ್ಕೊಬ್ಬನಧಿನಾಯಕಂ ಮನದಿ
ನಾರಾಧಿಸಲ್ ಬರುವ, ತನ್ನ ನೆಲೆಯನೆ ಕುಡುವ
ನಾರಾಯಣಂ ನಮ್ಮ ನಾಥನಿರೆ ಕುತ್ಸಿತದ ಬೇಡಿಕೆಯ ನೀಡಬಲ್ಲ
ಊರುಗಳು ಕೆಲವಕ್ಕೆ ವಿಭುವೆಂಬ ಗಣನೆಯಿಹ
ಪೂರುಷಾಧಮನಾವನೊಬ್ಬನನೊ ಸೇವಿಸಲು
ಕೋರಿ ಹುಡುಕುವೆವರರೆ! ಮೂಢರುಂ ಹೀನರುಂ ನಾವಲ್ಲವೇ
ಜಗದೊಳು || ೨೮ ||

ಮದನನೆ! ಮುಕುಂದನಡಿದಾವರೆಯಾ
ಸದನಂ ತಾನೆನಿಸಿಪೆನ್ನೀ ಮನದೊಳು
ಹುದುಗಿರೆ ಬಯಸಲ್ಬೇಡವೊ ಬಿಡುಬಿಡು! ನಿನಗಿರಲೆಚ್ಚರಿಕೆ
ಮೊದಲೇ ಮುಕ್ಕಣ್ಣನ ಕಣ್ಣುರಿಯಿಂ
ದೊದವಿದ ಬೇಗೆಗೆ ಬಡವಾಗಿದ್ದರ್ಯ್
ಬದಿಗಿರು! ಮುರಹರಚಕ್ರದ ತೇಜದ ಮರೆವಾಯಿತೆ ನಿನಗೆ? || ೨೯ ||

ನಿನಗರುಹುವೆನ್ನೈ ಹಿರಿದಕೆ ಹಿರಿದೆಂ
ದೆನಿಸಿದ ನಲ್ಮೆಯ ತತ್ತ್ವವನೊಂದಂ
ಇನಿದಹ ಜೇನಂ ಸುರಿಸುತೆ ಸುಜನರ ಮನಮಂ ವಶಗೊಂಡಾ
ಅನಘ ಫಲಂಗಳಿವೆನಿಸಿದ ನಾರಾ
ಯಣನಾ ತೋರುವ ನಾಮಾವಳಿಯಂ
ಪುನರಾವರ್ತಿಸಿ ಹಾಡೈ ನಾಲಗೆ! ನಿನಗಿದೊ ಕೈಮುಗಿವೆಂ || ೩೦ ||

ಎಂದುಮಿಾಯೊಡಲಳಿಯಲಿಹುದೈ,
ಸಂಧಿ ಬಂಧವು ಸಡಲಿ ಕಡೆಯುಲಿ
ಕುಂದಿ ಬೀಳಲ್ಕಿಹುದು ; ತಪ್ಪಿಸಲಾರಿಗಳವುಂಟು ?
ಮಂದಮತಿಯೇ ! ಏಕೆ ಮೂಢತೆ
ಯಿಂದೆ ಮದ್ದನು ಹುಡುಕಿ ಬಳಲುವೆ ?
ಸಂದ ಕೃಷ್ಣರಸಾಯನವ ಸೇವಿಸಲು ಮುಕ್ತನಹೆ ‖ ೩೧ ‖

ಸತಿ ನಿನಗೆ ಸಾಗರನ ಮಗಳು, ಮಗನು ವಿರಿಂಚಿ,
ಶ್ರುತಿಗಳೇ ಸ್ತುತಿಗೆಯ್ವ ವಂದಿಗಳು, ನಿರ್ಜರ
ಪ್ರತತಿಯೇ ಸೇವಕರ ಸಾಲಹಹ ! ಮುಕ್ತಿಯೇ ನೀನೊಲಿದು
ಕೊಡುವ ಕೊಡುಗೆ
ಕ್ಷಿತಿಯಿರದೆ ಹರಡಿರುವ ಜಗವೆ ನಿನ್ನಯ ಮಾಯೆ,
ಅತುಳ ದೇವಕಿದೇವಿ ತಾಯ್ ನಿನಗೆ, ಸುರಪತಿಯ
ಸುತನೆ ಗೆಳೆಯನು ; ಬಳಿಕ ನೀನುಳಿಯೆ ಬೇರೆ ನಾಂ ರಕ್ಷಿಸುವ
ವಿಭುವನರಿಯೆ ‖ ೩೨

ಕೃಷ್ಣನಾ ತ್ರಿಭುವನದ ಗುರು ನಮ್ಮ ರಕ್ಷಿಸಲಿ,
ಕೃಷ್ಣನಂ ವಂದಿಸುವೆನಾನು, ಸುರವೈರಿಗಳು
ಕೃಷ್ಣನಿಂದಲೆ ನಾಶವಾದರಾ ಕೃಷ್ಣಂಗೆ ನಮಿಸುವೆನು ನಾನು ನಿತ್ಯ
ಕೃಷ್ಣನತ್ತಣಿಸೆ ಈ ಜಗವೆಲ್ಲವುದಯಿಸಿತು,
ಕೃಷ್ಣನಡಿಯಾಳಾಗಿ ನಾನಿಹೆನು, ಬಳಿಕೇನು ?
ಕೃಷ್ಣನಲ್ಲಿಯೆ ವಿಶ್ವವೆಲ್ಲವಿದು ನೆಲಸಿಹುದು, ಶ್ರೀಕೃಷ್ಣ
ರಕ್ಷಿಸೆನ್ನಂ ‖ ೩೩ ‖

ಹಿರಿಯನೆನಿಸಿದೆಯಿಂತು ಭಗವನ್ !
ಕರುಣೆದೋರ್ಯೆ ಒಲಿದು ವಿಷ್ಣುವೆ !
ಪರಮಕರುಣಾಕರತೆ ಜಗದಲಿ ನಿನಗೆ ಸಂದುದಲೇ
ಅರಿಯಲಿಲ್ಲೈ ಬೇರೆಗತಿ, ಭವ
ಶರಧಿಯಲಿ ಮುಳುಗಿಹೆನು ; ನೀನು
ದ್ಧರಿಸಲರ್ಹನನಂತ ! ಪುರುಷೋತ್ತಮನೆನಿಪ್ಪೆಯಲಾ || ೩೪ ||

ನಮಿಸುವೆನಡಿದಾವರೆಯನು ನಾರಾಯಣನಾ
ನಡೆಸುವೆ ಪೂಜೆಯನೆಂದುಂ ನಾರಾಯಣನಾ
ನುಡಿವೆನು ನಿರ್ಮಲನಾಮವ ನಾರಾಯಣನಾ
ಸ್ಮರಿಸುವೆನವ್ಯಯ ತತ್ತ್ವವ ನಾರಾಯಣನಾ || ೩೫ ||

ಸಿರಿಯೊಡೆಯನೆ, ನಾರಾಯಣ, ವಸುದೇವಸುತಾ
ಸಿರಿಕೃಷ್ಣನೆ, ಭಕ್ತಪ್ರಿಯ, ಶುಭಚಕ್ರಧರ
ಸರಸಿಜನಾಭನೆ, ಅಚ್ಯುತ, ಕೈಟಭರಿಪುವೇ
ಸಿರಿರಾಮಾ, ಕಮಲಾಕ್ಷನೆ, ಹರಿಯೇ ಮುರಹರನೇ || ೩೬ ||

ಅನಂತ, ವೈಕುಂಠ, ಮುಕುಂದ, ಕೃಷ್ಣ,
ಗೋವಿಂದ, ದಾಮೋದರ, ಮಾಧವಾ–ಎಂದು
ನುಡಿಯಲ್ಕೆ ಬಾಯಿಪ್ಪು ನುಡಿಯದವನೂ ಉಂಟು
ಅಚ್ಚರಿಯು ನರರ ಬೆಸನದ ಕಡೆಗೆ ಹರಿವು || ೩೭ ||

*ನಿರ್ವಿಕಾರಂ ವ್ಯಾಪಿ ಕೊನೆಯಿಲ್ಲದವನೆನಿಸಿ
ಹೃದಯಪದ್ಮದ ನಡುವೆ ಸಂತತಂ ನೆಲಸಿ
ತನ್ನನೇ ನಚ್ಚಿದರಿಗಭಯಮಂ ಕುಡುವನಂ
ಧ್ಯಾನಿಪರಿಗೊದಗುವುದು ವೈಷ್ಣವೀ ಸಿದ್ಧಿ || ೩೮ ||

---

*ಅವ್ಯಯನನಂತನೂ ವಿಷ್ಣುವೆಂದೆನಿಸಿ

ಪಾಲ್ಗಡಲ ತೆರೆಯ ತುಂತುರುಮಳೆಯ ಹನಿಯಿಂದೆ
†ಭಗಣಂಗಳುದಯಿಸಿದ ಗಗನವೆನೆ ಸೊಗಸಿ
ಶೇಷನೊಡಲಿನ ಸೊಗಸುಸಜ್ಜೆಯಲಿ ಪವಡಿಸಿದ
ಮಾಧವಂಗೆ ನಮೋ ಮಧುವೈರಿಗೆ ॥ ೩೯ ॥

ಆವಂಗೆ ಪದ್ಮಶರರೆಂಬ ವಿಪ್ರೋತ್ತಮರು
ಲೋಕವೀರರು ನಿಗಮವಿದರು ಕವಿವರರು
ಪ್ರಿಯಸಖರೊ ಕಮಲಾಕ್ಷನಡಿಮಲರ ತುಂಬಿಯಾ
ರಾಜ ಕುಲಶೇಖರನಿನಾದುದೀ ಕೃತಿಯು ॥ ೪೦ ॥

ಕಂದಂ॥ ಶ್ರೀ ವೇದಮೌಳಿಗುರುಪದ
ಜೀವನಜ ಭ್ರಮರ ಬಾಲನಿಂ ದೇಶಿಕನಿಂ
ಈ ವಿಧದೆ ಪಿಡಿಯೆಪಟ್ಟುದು
ಭಾವಕೆ ಕನ್ನಡಿ ನೃಪಾಲಕುಲಶೇಖರರಾ

ನಮೋ ರಾಜಕುಲಶೇಖರಾಯ ಕುಲಶೇಖರಾಯ

---

†ತಾರಗೆಗಳೆಡೆಗೊಂಡ ಬಾನಿನೊಲು ಸೊಗಸಿ



ಶ್ರೀಮದ್ವೇಂಕಟನಾಥರು.

॥ ಶ್ರೀಃ ॥

# ಶ್ರೀ ವೇಂಕಟನಾಥರ ಅಚ್ಯುತಶತಕಂ

ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾಹೃದಿ ॥

ನಮತ ತ್ರಿದಶಾನಾಂ ನಾಥಂ
ಸತ್ಯಂ ದಾಸಾನಾಮಚ್ಯುತಂ ಸ್ಥಿರಜ್ಯೋತಿಃ
ಗರುಡನದೀತಟತಮಾಲಂ
ಅಹೀಂದ್ರನಗರೌಷಧಾಚಲೈಕ ಗಜೇಂದ್ರಂ ॥ ೧ ॥

ಕಿಂಕರಸತ್ಯ ! ಸ್ತುತಿಸ್ತವ
ಸ್ವಯಂಭೂಗೇಹಿನೀವಿಲಾಸವ್ಯಾಹೃತಮಯೀ
ಭಣಿತಾ ಬಾಲೇನ ಮಯಾ
ಪಂಜರಶುಕಜಲ್ಪಿತಮಿವ ಕರೋತು ಪ್ರಸಾದಮ್ ॥ ೨ ॥

ಮಲಿನಮಪಿ ಭಾಷಿತಂ ಮಮ
ಕಿಂಕರಸತ್ಯ, ತವ ಕೀರ್ತಿ ಜ್ಯೋತ್ಸ್ನಾಪ್ರಸರೇ
ಲಗ್ನಂ ಲಭತಾಂ ವಿಶುದ್ಧಿಂ
ರಥ್ಯಾಸಲಿಲಮಿವ ತ್ರಿಪಥಗಾ ಸ್ರೋತೋಗತಮ್ ॥ ೩ ॥

ತ್ರಸ್ತರಿನಯೇನ ಸ್ಥಾಪಿತಾ
ಶೋಭತಾಂ ತ್ರಿದಶಾನಾಂ ನಾಥ ತವ ಸಮಾಜೇ
ವಂದಿತ್ವಮಹಿತಾನಾಂ ಮಧ್ಯೇ
ಶ್ರುತೀನಾಂ ಬಾಲಿಶಾ ಮಮ ಸ್ತುತಿಃ ॥ ೪ ॥

॥ ಶ್ರೀ ॥

# ಶ್ರೀ ವೇಂಕಟನಾಥರ ಅಚ್ಯುತಶತಕಂ

(ಅನುವಾದ)



ನಮಿಸಿರ್ಪೆ ಗರುಡನದಿಯೆಡೆಯ ಹೊಂಗೆಯ ಮರಕೆ
ಔಷಧಾಚಲತಟವಿಹಾರಿ ಸಲಗಂಗೆ
ದಾಸಜನಕೆಂದಿಗೂ ತಪ್ಪದಚ್ಯುತವೆನಿಪ
ನಂದದೀವಿಗೆಯಾದ ದೇವನಾಥಂಗೆ—ನಮಿಸಿರ್ಪೆ ಅಹೀಂದ್ರಪುರಹರಿಗೆ ॥ ೧ ॥

ದಾಸಸತ್ಯನೆ ! ಒಲಿದು ವಾಣಿ ವೀಣಾಪಾಣಿ
ಕೊಂಡಾಡಿ ನಲಿನಲಿವ ನಿನ್ನ ನುತಿಗಳನು
ಅನುಕರಿಸಿ ಪಂಜರದ ಗಿಳಿಯಂತೆ ಜಲ್ಪಿಸುವ
ಬಾಲನೀ ನುಡಿಗೂ ಪ್ರಸನ್ನನಾಗೈ ॥ ೨ ॥

ಗಂಗಾಪ್ರವಾಹದಲಿ ಬಚ್ಚಲಿನ ನೀರದೂ
ಬೆರೆತು ಕೊಳೆಯಂ ನೀಗಿ ಸಲ್ಲುವಂತೆ
ಎನ್ನ ನುಡಿಯೆಂತಾದರೂ ನಿನ್ನ ಬೆಳ್ಜಸದ
ಬೆಳುದಿಂಗಳೊಡಗೂಡಿ ಶುಚಿಯೆನಿಸಲೈ ॥ ೩ ॥

ನಿನ್ನನುತಿಯೊಳು ನುರಿತ ವಂದಿಗಳ ಪೋಲಿರ್ಪ
ಹಿರಿಯಶ್ರುತಿಗಳ ನಡುವೆಯೆನ್ನ ಕಿರುನುತಿಯು
ಶೋಭಿಸಲಿ ಸುರನಾಥ ! ಹಿರಿಯ ಸಭೆಯಲ್ಲಿಯೂ
ರಸವೀವ ವಿಕಟಕವಿ ವಚನದಂತೆ ॥ ೪ ॥

ಅಸ್ಮದ್ಗುರೂಣಾಮಚ್ಯುತ
ಜಿಹ್ವಾಸಿಂಹಾಸನೇ ಲಬ್ಧಪ್ರತಿಷ್ಠಃ
ಪ್ರತಿಪಾದಿತಪರಮಾರ್ಥೋ
ವಾರಯಸ್ಯಪಂಡಿತತ್ವಮಸ್ಮಾಕಂ ॥ ೫ ॥

ಹೃದಯೇಷು ದೇಶಿಕಾನಾಂ
ಜಾಹ್ನವೀಲಹರೀಷು ಪೂರ್ಣಚಂದ್ರ ಇವ ಸ್ಫುಟಃ
ಕಲುಷಜಲೇಷ್ವಿವ ಹಂಸಃ
ಕಷಾಯ ಕರ್ಬುರೇಷು ತಿಷ್ಠಸ್ಯಚ್ಯುತ ನ ಕ್ಷಣಮ್ ॥ ೬ ॥

ಆಗಮಮಾತ್ರಪ್ರಮಾಣ
ಆಗೋಪೀಜನಂ ಪ್ರಕಾಶನಿಜಮಾಹಾತ್ಮ್ಯಃ
ಶ್ರದ್ಧಿತ ಹೃದಯ ಸುಲಭಃ
ದೂರಂ ಮುಂಚಸಿ ನತಸತ್ಯ ದೋಲಾಯಮಾನಾನ್ ॥ ೭ ॥

ಸದಾ ಕ್ಷಪಿತಸಕಲಹೇಯಂ
ಶರಣಾಗತಸತ್ಯ, ಸತ್ಯಜ್ಞಾನಾನಂದಂ
ಉಲ್ಲಂಘಿತತ್ರಿವಿಧಾಂತಂ
ಉಪನಿಷದಾಂ ಶತಾನಿ ಗಾಯಂತಿ ತ್ವಾಮ್ ॥ ೮ ॥

ಕರೋಷಿ ನ ಕ್ರಿಯಸೇ
ಕೇನಾಪಿ ಸ್ಥಾಪಯಸಿ ನ ಸಂಸ್ಥಾಪ್ಯಸೇಽನನ್ಯಸ್ಥಿತಃ
ಹರಸಿ ನಿಖಿಲಂ ನ ಹ್ರಿಯಸೇ
ಅಹೀಂದ್ರನಗರೇಂದ್ರಾನಘಜ್ಯೋತಿಸ್ಸ್ಫುರನ್ ॥ ೯ ॥

ಅಣುಪ್ರಮಿತಸ್ಯಾಪ್ಯಚ್ಯುತ
ಶಕ್ತಿಸ್ತವ ಸಕಲಧಾರಣಾದಿಪ್ರಭೂತಾ
ತೇನ ಪ್ರತಿವಸ್ತುಪೂರ್ಣಃ
ಭ್ರಾಮ್ಯಸೇ—ಅಪ್ರತಿಹತನಿಜಸ್ಥಿತಿಃ ಸರ್ವಗತಃ ॥ ೧೦ ॥

ಎಮ್ಮ ಗುರುಗಳ ನಾಲಗೆಯ ಸಿಂಹಪೀಠದಲಿ
ನೆಲೆಗೊಂಡು ಸತ್ಯವನೆ ಸಾರಿರುವೆ ನೀನು
ಇಂತು ಮೂಢತೆ ಕಳಿಯೆ ನಿನ್ನ ವಿಷಯದೆ ನಾವು
ನುಡಿವ ನುಡಿ ಸತ್ಯದಿಂ ದೂರವಹುದೆ—ಓ ಅಚ್ಯುತನೆ ॥ ೫ ॥

ಜಾಹ್ನವಿಯ ಲಹರಿಯುಲಿ ತುಂಬುವೆರೆ ಹೊಳೆವಂತೆ
ನಿರ್ಮಲರ ಹೃದಯದಲಿ ಸ್ಫುಟವಾಗಿ ಮೆರೆವೆ
ಕೊಳೆನೀರನುಳಿದು ಕಡೆಸಾರುವಾ ಹಂಸದೊಲು
ಕ್ಷಣವಾದರೂ ನಿಲ್ಲೆ ಕಲುಷರೆದೆಯೊಳ್—ಓ ದೇವ ॥ ೬ ॥

ಆಗಮುಗಳಿಂದಲೇ ಅರಿಯೆ ಬಹನಾದರೂ
ಪ್ರಕಟಿಸಿದೆ ಗೊಲ್ಲವೆಣ್ಗಳಿಗು ಮಹಿಮೆಯನು
ನಂಬಿದರ ಚಿತ್ತಕ್ಕೆ ಸುಲಭನೆನಿಸಿದ ನೀನು
ಡೋಲಾಯಮಾನರನು ದೂರ ಬಿಡುವೆ
ಓ ಪ್ರಭುವೆ ನತಸತ್ಯ! ಚಂಚಲರ ಚಿತ್ತಕ್ಕೆ ದೂರವಿರುವೆ ॥ ೭ ॥

ಹೇಯ ಗುಣವಿಲ್ಲದವ, ಸಚ್ಚಿದಾನಂದಸಿವ !
ಮೂರುಬಗೆಯವಧಿಯನು ಮೀರಿದವನು
ಎಂದು ನೂರೆಂಟುಪನಿಷತ್ತುಗಳು ನಲವಿಂದ
ನತಸತ್ಯ ! ಪಾಡುವುವು ನಿನ್ನ ನಿತ್ಯ ॥ ೮ ॥

ರಚನೆಗೊಳಗಾಗದಿಹೆ ಯೆಲ್ಲವನು ರಚಿಸುವೈ
ನೆಲೆಯಿಲ್ಲ ನಿನಗೆ ; ಸಕಲವನು ನೆಲೆಗೊಳಿಪೆ
ಎಲ್ಲವನು ಪರಿಹರಿಪೆ ! ನಿನಗಿಲ್ಲ ಪರಿಹಾರ !
ಅನಘತೇಜೋಮೂರ್ತಿಯಿಂತು ಮೆರೆವೆ—ಓ ಅಹೀಂದ್ರನಗರೇಶ್ವರನೆ ॥ ೯ ॥

ಅಣುವಿನಳತೆಯ ಸೂಕ್ಷ್ಮರೂಪದಲ್ಲಿಯು ದೇವ
ಸಕಲವನು ಧರಿಸುವುದು ನಿನ್ನ ಶಕ್ತಿ
ಅದರಿಂದೆ ಕೊರೆಯಿಲ್ಲದೆಲ್ಲವಸ್ತುವ ನೀನೆ
ತಡೆಯಿರದೆ ತುಂಬಿಯುಂ ಪೂರ್ಣನೆನಿಪೆ ॥ ೧೦ ॥

ಸಕಲಾನಾಂ ಧರಣನಿಯಮನ
ಸ್ವಾಮಿತ್ವನಿಯಮ ಸಂಸ್ಥಿತಃ ಸರ್ವತನುಃ
ಶ್ರೂಯಸೇಽಚ್ಯುತ ಸರ್ವಃ
ಸದಾ ದರ್ಶಿತಕಾರ್ಯಕಾರಣತ್ವಕರ್ಬುರಃ || ೧೧ ||

ಪುರುಷಪ್ರಧಾನಶರೀರೋ
ಭುವನಾನಾಂ ಭವಸ್ಯಚ್ಯುತ ಉಪಾದಾನಮ್
ನಿಜಸಂಕಲ್ಪಸನಾಥೋ
ವಹಸಿ ನಿಮಿತ್ತತ್ವಮಪ್ಯದ್ಭುತಶಕ್ತಿಃ || ೧೨ ||

ವಿಷಮಗುಣಾಙ್ಕುರಪ್ರಕರೇ
ಜಲಮಿವ ಸಾಮಾನ್ಯಕಾರಣಂ ತವಕೇಳಿಃ
ನಿಜಕರ್ಮಶಕ್ತಿನಿಯತಾ
ಅಚ್ಯುತ ಬ್ರಹ್ಮಾದಿಸ್ಥಾವರಾನ್ತ ವಿಶೇಷಾಃ || ೧೩ ||

ಪುರುಷಾಸ್ತವ ವಿಭೂತಿ
ರಚ್ಯುತ ಲಕ್ಷ್ಮ್ಯಾಃ ಸ್ತ್ರೀಸಂಜ್ಞಾಃ
ನಾಸ್ತಿ ಪರಂ ಯುವಯೋಃ
ಸಾಽಪಿ ಶ್ರೀರ್ಭವತಿ ತವ! ಕಿಂ ಪುನರಿತರತ್ || ೧೪ ||

ನ ಖಲು ತವ ಸದೃಶಾಭ್ಯಧಿಕಾಃ
ನಾಥ, ತ್ವಮೇವ ಸರ್ವಲೋಕಶರಣ್ಯಃ
ಏತಾವಜ್ಜ್ಞಾನಸಾರ
ಮಿತಿ ಜ್ಞಾತುಂ ತ್ರಿದಶನಾಥ! ಇತರವಿಚಿಂತಾ || ೧೫ ||

ಭಾತಿ ಫಣೀಂದ್ರಪುರಾಧಿಪ!
ಪ್ರತಿಪಾಲಯತ್ಸು ಪ್ರಕಟ ಪ್ರಭೂತಫಲಾ
ಅಪಿ ದ್ರುಹಿಣಪ್ರಮುಖೈಃ
ಆಜ್ಞಪ್ತಿಸ್ತವಾಲಂಘನೀಯ ಪ್ರಭಾವಾ || ೧೬ ||

ಧರಿಯಿಸುವೆ, ನಿಯಮಿಸುವೆ, ಆಳುತಿಹೆ, ಮೇಳವಿಸಿ
ಯೆಲ್ಲರೂಪವ ಧರಿಸಿ ನೀನೆ ನೆಲೆಗೊಂಡು
ಕಾರಣವು ನೀನಾಗಿ ಕಾರ್ಯವೂ ನೀನಾಗಿ
ತೋರುವಂತಹನೆಂದು ಕವಿಗಳರಿವು—ಓ ಅಚ್ಯುತನೆ!
ಕಾರ್ಯಕಾರಣ ನೀನು ನಮ್ಮ ತಿಳಿವು ॥ ೧೧ ॥

ಚಿದಚಿಚ್ಛರೀರನಾಗುತೆ ನೀನೆ ಅಚ್ಯುತನೆ
ಜಗಗಳಿಗುಪಾದಾನ ಕಾರಣವೆನಿಪ್ಪೈ
ಸಲೆ ನಿಮಿತ್ತತ್ವಮುಂ ಸಂಕಲ್ಪಮಾತ್ರದಲೆ
ವಹಿಸುವೈ ಅದ್ಭುತದ ಶಕ್ತಿಯಿಂದೆ ॥ ೧೨ ॥

ಬೇರೆಬೇರೆಯ ಗುಣದ ಬೀಜಗಳ ಮೊಳೆಬೆಳೆಗೆ
ಸಾಮಾನ್ಯ ಕಾರಣವು ನೀರದೆಂತೋ
ಅಂತೆ ನಿನ್ನಯ ಲೀಲೆ ಕರ್ಮಶಕ್ತಿಯ ಬಲದೆ
ಬ್ರಹ್ಮನಿಂ ಸ್ಥಾವರದವರೆಗಿನೇಳಿಗೆಗೆ ॥ ೧೩ ॥

ಗಂಡೆಲ್ಲ ನಿನ್ನಯ ವಿಭೂತಿ, ಓ ಅಚ್ಯುತನೆ!
ಹೆಣ್ಣೆಂಬುದೆಲ್ಲ ಸಿರಿದೇವಿಯಾ ಹರಹು
ನಿಮ್ಮಿಬ್ಬರಿಂದೆ ಹೊರಗಾದುದೇನುಂಟೆನ್ನು?
ಸಿರಿಯು ನಿನ್ನವಳವಳು ಮಿಕ್ಕುದೇನು? ॥ ೧೪ ॥

ದೇವಾಧಿದೇವನೇ! ನಿನಗೆ ಸದೃಶರೆ ಇಲ್ಲ
ಮೇಲಾದರಿನ್ನುಂಟೆ? **ನೀನೆ ಜಗಕೆಲ್ಲ**
**ರಕ್ಷಕನೆನಿಪ್ಪುದೇ ಎಲ್ಲ ತಿಳಿವಿನ ತಿರುಳು**
ಬೇರೆಲ್ಲ ಚಿಂತೆಯೂ ಇದನರಿಯಲು—ಓ ಪ್ರಭುವೆ!
ಬೇರೆಲ್ಲ ಚಿಂತೆಯೂ ಇದನರಿಯಲು ॥ ೧೫ ॥

ಫಣಿಪತಿಪುರಾಧಿಪನೆ, ನಿನ್ನಾಜ್ಞೆಯನುಸರಿಸಿ
ನಡೆವವರಿಗತ್ಯಧಿಕ ಫಲವು ಸಿದ್ಧ
ಕಮಲಸಂಭವ ಮುಖ್ಯರೂ ಮೀರಲಾಗದುದು
ನಿನ್ನ ಕಟ್ಟಾಣತಿಯ ವಿಭವವಿಂತು ॥ ೧೬ ॥

ನಿಯಮವಿಧೀನಾಂ ಪ್ರವೃತ್ತಿಃ
ಸರ್ವೇಷಾಮಪಿ ದಾಸಸತ್ಯ, ಉದ್ದಿಶ್ಯತ್ವಾಮ್
ಶ್ರಾದ್ಧನಿಮಂತ್ರಿತಬ್ರಾಹ್ಮಣ
ಸವಶಾಧಿಸಿದ್ಧಾಂ ಲಭಂತೇ ತ್ರಿದಶಾ ಭುಕ್ತಿಮ್ ||೧೭||

ಆರಾಧ್ಯತ್ರಿದಶವಿಲಯೇ ಅಚ್ಯುತ
ನಿತ್ಯಂ ನ ತಿಷ್ಠಸಿ ಯದಿ ನಾಮ ತ್ವಮ್
ಕರ್ಮಣಾಂ ಕಲ್ಪಿತಾನಾಂ
ಕರಿಷ್ಯತಿ ಕಲ್ಪಾಂತರೇಷು ಕೋ ನಿರ್ವೇಶಮ್ ||೧೮||

ಕಲ್ಪಯಸಿ ಕಾಂಕ್ಷಿತಾನಿ
ಕಲ್ಪದ್ರುಮ ಇವ ಶ್ರೀಕಾಂಚನಲತಾಸಹಿತಃ
ನತಸತ್ಯ ಸದಾ ಫಲಾನಿ
ನಿಜಚ್ಛಾಯಾನಿರ್ಭಿನ್ನನಿತ್ಯತಾಪತ್ರಿಭುವನಃ ||೧೯||

ಸಕಲಾಗಮಾನಾಂ ನಿಷ್ಠಾ
ಸಕಲಸುರಾಣಾಮಪ್ಯನ್ತರ ಆತ್ಮಾ
ಸಕಲಫಲಾನಾಂ ಪ್ರಸೂತಿಃ
ಸಕಲಜನಾನಾಂ ಸಮಃ ಖಲು ನತಸತ್ಯ, ತ್ವಮ್ ||೨೦||

ಇತಿ ಸರ್ವೇಷಾಂ ಸಮಾನಃ
ಸತ್ಯಸ್ಥಿತೋ ದಾಸಸತ್ಯ ಸದಾ ಪರಿಪೂರ್ಣಃ
ಕಥಂ ವಹಸಿ ಪಕ್ಷಪಾತಂ
ಪಾಂಡವಪ್ರಮುಖೇಷು ಪ್ರೇಷಣಮಪಿ ಸಹಮಾನಃ ||೨೧||

ವಿಷಮೇ ಕರ್ಮಮಾರ್ಗೇ
ವಿಪರಿಸ್ಖಲತಾಂ ವಿಹ್ವಲಿತ ಕರಣಾನಾಂ
ನಾಥ ! ನಿಖಿಲಾನಾಮನ್ಯೋ
ನಾಸ್ತಿ ತ್ವನ್ನತಸತ್ಯ, ಹಸ್ತಾಲಂಬಃ ||೨೨||

ಎಲ್ಲ ನಿಯಮವ್ರತಗಳಾಚರಣೆಯನುಸರಣೆ
ನಿನ್ನನುದ್ದೇಶಿಸಿಯೆ ದಾಸಸತ್ಯ
ಬ್ರಾಹ್ಮಣ ನಿಮಂತ್ರಣದೆ ಪಿತೃತೃಪ್ತಿಯಪ್ಪಂತೆ
ಸುರರ ತಣಿಯಿಸಲಹುದು ನಿನ್ನ ತೃಪ್ತಿ ॥ ೧೭ ॥

ಅಚ್ಯುತನೆ ಪೂಜೆಗೊಳ್ವಮರರೇ ಅಳಿವಂದು
ನಿತ್ಯನಹ ನೀನಿಲ್ಲದಿರಲು ಬಳಿಕ
ಅವರನುದ್ದೇಶಿಸಿಯೆ ನಡೆಯಿಸಿದ ಕರ್ಮಕ್ಕೆ
ಫಲವ ಕಲ್ಪಾಂತರದೆ ಕುಡುವರಾರು? ॥ ೧೮ ॥

ಕಾಂಚನದಲತೆ ಬಳೆದ ಕಲ್ಪವೃಕ್ಷದವೋಲು
ಶ್ರೀದೇವಿಯಂ ಕೂಡಿ ನೆಳಲನೀಯುತ್ತ
ತ್ರಿಭುವನದ ತಾಪಮಂ ಕಳೆದು ನತಸತ್ಯ, ನೀಂ
ಬಯಸಿದ ಫಲಂಗಳಂ ಕುಡುವೆ ನಿತ್ಯಂ ॥ ೧೯ ॥

ಎಲ್ಲ ಶಾಸ್ತ್ರಂಗಳೂ ಕೊಂಡಾಡುವವ ನೀನು
ಎಲ್ಲ ದೇವತೆಗಳಿಗು ಅಂತರಾತ್ಮಂ
ಎಲ್ಲ ಬಗೆ ಫಲಗಳನು ನೀಡುವಾತನು ನೀನೆ
ಎಲ್ಲ ಜನಕೂ ಸಮನು ನತಸತ್ಯ ನೀಂ ॥ ೨೦ ॥

ಇಂತೆಲ್ಲರಿಗು ನೀನೆ ಸಮನಾಗಿ ಸತ್ಯದಲಿ
ನೆಲೆಗೊಂಡು ನಿತ್ಯವೂ ಪರಿಪೂರ್ಣನೆನಿಸಿ
ಪಾಂಡವಪ್ರಮುಖರಲಿ ಪಕ್ಷಪಾತವ ತೋರ್ಪೆ
ಆಳಾಗಿಯೂ ನಡೆವೆ! ಹೇಗೊ ನಾನರಿಯೆ! ॥ ೨೧ ॥

ವಿಷಮವಹ ಕರ್ಮಮಾರ್ಗದೆ ನಡೆದು ಜಾರುತ್ತ
ಕರಣಂಗಳೆಲ್ಲವೂ ಕುಸಿದು ನಸಿದು
ಕಳವಳಿಸುವೆಲ್ಲರಿಗೆ ನೀನಲ್ಲದಿನ್ನಿಲ್ಲ
ದಾಸಜನತಾಸತ್ಯ! ಬೇರೆಯೂರೆ ॥ ೨೨ ॥

ಜ್ಞಾನಸ್ಯ ಕೋಽವಿಷಯೋಽ
ಚ್ಯುತ ಕರುಣಾಯಾಸ್ತವ ಕೋ ದೂರಸ್ಥಿತಃ
ಶಕ್ತೇಃ ಕೋಽತಿಭರ
ಸ್ತಸ್ಮಾತ್ಖಲೂಪಾಯಸ್ತ್ವಮೇವ ಸ್ವಯಂ ಸಿದ್ಧಃ ॥ ೨೩ ॥

ಸಂಕಲ್ಪಕರ್ಣಧಾರಃ
ಕಿಂಕರಸತ್ಯ, ಭವಸಾಗರೇಽತಿ ಗಭೀರೇ
ಅನಘಸ್ತ್ವಂ ಖಲು ಪೋತಃ
ಆತ್ಮನಾಂ ಕೃಪಾಸಮೀರಣೇನ ಪ್ರಯುಕ್ತಃ ॥ ೨೪ ॥

ಅಚ್ಯುತ ನ ದದತಿ ಮೋಕ್ಷಂ
ಈಶ್ವರಭಾವೇನ ಭಾವಿತಾ ಇತರಸುರಾಃ
ರಾತ್ರಿಂ ಪರಿವರ್ತಯಿತುಂ
ಲಕ್ಷಮಾಲೇಖ್ಯದಿನಕರಾಣಾಮಪಿ ನ ಕ್ಷಮಮ್ ॥ ೨೫ ॥

ಅಮೃತರಸಸಾಗರಸ್ಯೇವ
ಅಹೀಂದ್ರ ಪುರನಾಥ ನಿರ್ಮಲಮಹಾರ್ಘಾಣಿ
ತೀರ್ಯಂತೇ ನ ವಿಗಣಯಿತುಂ
ಅನನ್ಯಸುಲಭಾನಿ ತವ ಗುಣ ರತ್ನಾನಿ ॥ ೨೬ ॥

ಭೂಷಿತಶ್ರುತಿಸೀಮಂತೋ
ಭುಜಗೇಂದ್ರಪುರೇಶ ಸರ್ವಗುಣಸೀಮಾಂತಃ
ಕ್ಷಪಿತತ್ರಪಾಮಲಮೋಹೋ
ಮುನೀನಾಂ ಹೃದಯೇಷು ಸ್ಫುರಸಿ ಶ್ಯಾಮಲಮಯೂಖಃ ॥ ೨೭ ॥

ಶುಭಲಕ್ಷಣಶ್ರೀವತ್ಸಃ
ಶೋಭಸೇ ನಿರ್ಮುಕ್ತವಿರಹಕ್ಷಣಶ್ರೀವತ್ಸಃ
ರಣದೇವನಸವಿಹಗಃ
ಉದ್ಘಟಗರುಡನದೀತೀರವನಸವಿಧಗತಃ ॥ ೨೮ ॥

ನಿನ್ನ ತಿಳಿವಿಗೆ ಸಲದ ವಿಷಯವೇನೆಲೆದೇವ ?
ನಿನ್ನ ಕರುಣೆಗೆ ದೂರವೆಂದೆನಿಪರಾರು ?
ಆವ ಹೊರೆ-ನಿನ್ನ ಶಕ್ತಿಗೆ ಮೀರಿದುದು ಪ್ರಭುವೆ ?
ನೀನೆ ಸಿದ್ಧೋಪಾಯವೆಮಗೆ ಬದ್ಧ || ೨೩ ||

ಆಳವರಿಯಲುಬಾರದುರುಭವಾಂಬುಧಿಯಲ್ಲಿ
ಜಾರಿ ಬಿದ್ದಾತ್ಮರನಃ ದಡವ ಮುಟ್ಟಿಸಲು
ಕರುಣೆಗಾಳಿಯ ಬಲದೆ ಸಂಕಲ್ಪನಾವಿಕಂ
ನಡೆಯಿಸುವ ಶುಭನಾವೆ ನೀನೆ ಅಚ್ಯುತನೆ || ೨೪ ||

ಪರದೈವವೆಂದೆನುತೆ ಬೇರೆ ದೇವರ್ಕಳನು
ಪೂಜಿಸಲು ಮೋಕ್ಷವನು ಸಲಿಸಬಹುದೆ
ಚಿತ್ರಿಸಿದ ದಿನಕರರು ಲಕ್ಷಗಟ್ಟಲೆ ಸಲಲು (ಕೂಡೆ)
ಯಿರುಳ ಹಗಲಾಗಿಸಲು ಶಕ್ಯವಹುದೇ ? || ೨೫ ||

ಅಮೃತ ರಸಸಾಗರದ ನಿರ್ಮಲಾಮೂಲ್ಯ ಘನ
ರತ್ನಂಗಳಂತೆ ಬೇರೆಡೆ ದೊರೆಯದಾ
ನಿನ್ನಗುಣ ರತ್ನಂಗಳೆನಿತೆಂದು ಲೆಕ್ಕಿಸಲು
ಶಕ್ಯವಾಗವಹೀಂದ್ರಪುರನಾಥ ದಿಟದಿಂ || ೨೬ ||

ಶ್ರುತಿಯ ಸೀಮಂತಮಂ ಸಿಂಗರಿಪ ನಿಜತನುವ
ಶ್ಯಾಮಶುಭಕಾಂತಿಯಂ ಹೆಸರಿಸುತ್ತ
ಪೇರಾಸೆಮೋಹಗಳ ಕೊಳೆಯ ತೊಲಗಿಸಿ ಮೆರೆವೆ
ಭುಜಗೇಂದ್ರಪುರನಾಥ ! ಮುನಿಗಳೆದೆಯೊಳ್ || ೨೭ ||

ಶ್ರೀವತ್ಸಲಕ್ಷಣದೆ ಶೋಭಿಸುವೆ ಗಳಿಗೆಯೂ
ಅಗಲದಂತಿರೆ ಕೂಡಿ ಶ್ರೀವತ್ಸಲಂ
ಗರುಡನನು ಜತೆಗೊಂಡು ದಾನವರ ಸದೆದ ನೀಂ
ಗರುಡನದಿಯೆಡೆಯಲ್ಲಿ ವಿಹರಿಸುತಿಹೆ || ೨೮ ||

ಅಕುಮಾರಯೌವನಸ್ಥಿತಂ
ಅಹೀಂದ್ರಪುರನಾಥ, ಅಭಿಮತಮನುರೂಪಮ್
ನಿತ್ಯಂ ಸ್ವಭಾವಸಿದ್ಧಂ
ಶ್ರೂಯತೇ ಸೂರಿಮಹಿತಂ ಸುಖಂ ತವ ರೂಪಮ್ ॥ ೨೯ ॥

ತ್ರಿಗುಣಂ ತಸ್ಯ ವಿಕಾರಾ
ಅಚ್ಯುತ ಪುರುಷಇತ್ಯಾಗಮಗಣ್ಯಮಾನಾಃ
ಅರ್ಥಾಸ್ತವ ಖಲು ಸಮಸ್ತಾಃ
ಪರಸ್ಮಿನ್ರೂಪೇ ಭೂಷಣಾಸ್ತ್ರಸ್ವರೂಪಾಃ ॥ ೩೦ ॥

ನಿರ್ಯಂತಿ ತ್ವತ್ತೋಽಚ್ಯುತ
ನಿಕ್ಷಪಿತ ವಿಪಕ್ಷನಿಷ್ಠುರಪರಾಕ್ರಮಣಾಃ
ಸಂಸ್ಥಾಪಿತಪರಮಧರ್ಮಾಃ
ಸಾಧುಪರಿತ್ರಾಣಸತ್ಫಲಾ ಅವತಾರಾಃ ॥ ೩೧ ॥

ಹರಿಮಣಿಸದೃಕ್ಷನಿಜರುಚಿ
ಹರಿತಾಯಮಾನಭುಜಗೇಂದ್ರಪುರಪರ್ಯಂತಃ
ಕಾಲೇ ದಾಸಜನಾನಾಂ
ಕೃಷ್ಣಘನೋ ಭವಸಿ ದತ್ತಕಾರುಣ್ಯರಸಃ ॥ ೩೨ ॥

ಗರುಡನದೀಕಚ್ಛಾರಣ್ಯೇ
ಲಕ್ಷ್ಯಸೇ ಲಕ್ಷ್ಮೀಮಹೀಕರೇಣುಮನೋಹರಃ
ದೃಶ್ಯಮಾನಬಹುಳದಾನೋ
ದಿಶಾಗಜೇಂದ್ರ ಇವ ಖಂಡಿತದನುಜೇಂದ್ರದ್ರುಮಃ ॥ ೩೩ ॥

ಮುಖಚಂದ್ರಮೌಲಿದಿನಕರ
ಮಧ್ಯಸ್ಥಿತಸ್ತವ ಚಿಕುರಭಾರಾಂಧಕಾರಃ
ಅಘಟಿತಘಟನಾಶಕ್ತಿಂ
ಸತ್ಯಂ ಸ್ಥಾಪಯತಿ ದಾಸಸತ್ಯ, ಸಮಗ್ರಾಮ್ ॥ ೩೪ ॥

ಕೌಮಾರಮಂ ನಸುವೆ ಮೀರಿದುರು ಯವ್ವನಂ
ನೈಜಂ ! ಅನುರೂಪಂ ! ಅಭಿಮತಂ ! ಇದೆನಿಸೆ
ಸೂರಿಗಳ ಮನ್ನಣೆಗೆ ಸಿಲುಕಿ ಸುಖಮಯಮಾದ
ನಿತ್ಯಸ್ವರೂಪದಿಂ ಮೆರೆವೆ ವಿಭುವೆ || ೨೯

ಅಚ್ಯುತನೆ ! ಶಾಸ್ತ್ರಂಗಳೆಲ್ಲ ಲೆಕ್ಕಿಸಿ ಪೇಳ್ದ
ಪ್ರಕೃತಿಯುಂ ಪುರುಷನುಂ ಪ್ರಕೃತಿವಿಕೃತಿ
ನಿನ್ನಪರರೂಪದಲಿ ಭೂಷಣಾಸ್ತ್ರಗಳಂತೆ
ಹೊಂದಿ ತೋರುವುವೈಯ ಸಕಲ ವಸ್ತು || ೩೦ ||

ದುರ್ಜನರ ನಿಷ್ಠುರ ಪರಾಕ್ರಮವನಡಗಿಸುತ
ಸಾಧುಜನರಂ ಕಾಯಲುಜ್ಜುಗಿಸುತ
ಪರಮಧರ್ಮವ ಜಗದೆ ಸಂಸ್ಥಾಪಿಸಲ್ಕೆ ನೀಂ
ಪೊರಮಡಿಪೆಯವತಾರತತಿಯ ವಿಭುವೇ || ೩೧ ||

ನೀಲರತ್ನದವೋಲು ಹೊಳೆವ ತನುಕಾಂತಿಯಿಂ
ಭುಜಗೇಂದ್ರ ಪುರವರದ ಸುತ್ತನೆಲ್ಲವನು
ನೀಲ್ಗೈಸಿ ಕೃಷ್ಣಘನ ಕಾರುಣ್ಯವರ್ಷಮಂ
ಕಾಲದಲಿ ಕರೆವೆ ನೀಂ ದಾಸಜನಕೆ || ೩೨ ||

ದನುಜವೃಕ್ಷಂಗಳನು ಲೀಲೆಯಿಂ ಮುರಿದ ನೀಂ
ದಾನಧಾರೆಯ ಮೆರೆದು ಗರುಡನದಿಯೆಡೆಯ
ಬನದಲ್ಲಿ ಸಿರಿಧರೆಗಳೆಂಬ ಪಿಡಿಗಳ ಮನವ
ವಶಗೊಂಡು ತೋರುತಿಹೆ ದಿಗ್ಗಜದೊಲು || ೩೩ ||

ನಿನ್ನ ಮುಖಚಂದ್ರಂಗೆ ಮುಕುಟದಿವಸಕರಂಗೆ
ನಡುವೆ ಅಚ್ಚಳಿಯದೆಯೆ ಸೊಗಸಿನಿಂದ
ಮೆರೆಯುತಿಹ ಕುರುಳ ಕತ್ತಲೆಯ ಸಾಕ್ಷಿಯೊಳಾಯ್ತು
ಸ್ಥಾಪಿತವು ನಿನ್ನಘಟಘಟನಶಕ್ತಿ—ಓ ವಿಭುವೆ ! || ೩೪ ||

ಪರಿಹಸಿತಪೂರ್ಣಚಂದ್ರಂ
ಪದ್ಮಸದೃಕ್ಷಪ್ರಸನ್ನಲೋಚನಯುಗಲಂ
ಸಂಕಲ್ಪಿತದುರಿತಾನ್ಯಪಿ
ಸಂಸ್ಮೃತಂ ಹರತಿ ದಾಸಸತ್ಯ, ತವ ಮುಖಮ್ ॥ ೩೫ ॥

ಮಾಹಾತ್ಮ್ಯಂ ತವ ಮಹಿತಂ
ಮಾಂಗಳಿಕಂ ತುಲಸೀಕೌಸ್ತುಭ ಪ್ರಮುಖಾಣಾಮ್
ಅಚ್ಯುತ ಸ್ಥಿರವನಮಾಲಂ
ವತ್ಸಂ ದರ್ಶಯತಿ ಲಕ್ಷ್ಮೀಲಕ್ಷಣ ಸುಭಗಮ್ ॥ ೩೬ ॥

ನಿರ್ವಿಶತಿ ನಿತ್ಯತಾಪೋ
ದೇವಜನೋ ದೇವನಾಯಕವಿಧಿಪ್ರಮುಖಃ
ಶೀತಲಶಾಂತಪ್ರಭೂತಾಂ
ಛಾಯಾಂ ತವ ವಿಪುಲಬಾಹುಕಲ್ಪದ್ರುಮಾಣಾಮ್ ॥ ೩೭ ॥

ಸಂಕಲ್ಪಚಂದ್ರಕ್ಷೋಭಿತ
ತ್ರಿಗುಣೋದಧಿವಿಪುಲಬುದ್ಬುದಪ್ರಕರೈಃ
ಬ್ರಹ್ಮಾಂಡೈರಪಿ ಭರಿತಂ
ಕಿಂಕರಸತ್ಯ, ತವ ಕಸ್ಮಾನ್ನು ಕೃಶಮುದರಮ್ ॥ ೩೮ ॥

ನಾಭಿರುಹಂ ತವ ನಳಿನಂ
ಭುಜಗೇಶ್ವರನಗರನಾಥ, ಶೋಭತೇ ಸುಭಗಮ್
ಮಧ್ಯಸ್ಥಿತಬ್ರಹ್ಮಭ್ರಮರಂ
ವತ್ಸಾಸನಲಕ್ಷ್ಮೀಪಾದಪೀಠಸದೃಕ್ಷಮ್ ॥ ೩೯ ॥

ದೃಢಪೀಡಿತಮಧುಕೈಟಭ
ಶೋಣಿತಪಟಲಪರಿಪಾಟಲಾಂಬರಘಟಿತಾ
ರಾಜತ್ಯಚ್ಯುತ ಮುಖರಾ
ರತಿನಾಥಗಜೇಂದ್ರಶೃಂಖಲಾ ತವ ರಶನಾ ॥ ೪೦ ॥

ತಾವರೆಗಳೋರಗೆಯ ತಿಳಿಯಕಣ್ಣುಗಳೆಸೆವ
ಪೂರ್ಣಚಂದ್ರನ ನಗುವ ನಿನ್ನ ಮುಖವು
ನೆನೆದೊಡನೆ ನತಸತ್ಯ ಸುಖವಿತ್ತು ಮಾನಸಿಕ
ದುರಿತಗಳನೂ ದೇವ, ಪೋಗೊಳಿಪುದೈ ॥ ೩೫ ॥

ತುಲಸಿ ಕೌಸ್ತುಭ ಮುಖ್ಯ ಭೂಷಣಕೆ ಶುಭವು ಮಿಗೆ
ವನಮಾಲೆಯಿಂ ಕೂಡಿ ಮಹಿಮೆ ಬೀರಿ
ಶ್ರೀವತ್ಸಚಿಹ್ನವದು ತೋರುವುದು ನಿನ್ನೆದೆಯ
ಲಕ್ಷ್ಮಿನಿವಾಸ ಶುಭ ಲಕ್ಷಣವನು ॥ ೩೬ ॥

ನಿತ್ಯತಾಪಕೆ ಸಿಲುಕಿ ನೊಂದ ವಿಧಿಮುಖಸುರರು
ತಂಪಿಂಗೆ ನೆಲೆಯಾಗಿ ಶಾಂತಿಯೊದವಿಸುವಾ
ನಿನ್ನ ನೀಳ್ತೋಳುಗಳ ಕಲ್ಪವೃಕ್ಷಂಗಳಾ
ನೆಳಲನನುಭವಿಸುತ್ತ ಸುಖದಿನಿಹರೈ ॥ ೩೭ ॥

ಪ್ರಕೃತಿಜಲರಾಶಿಯಂ ನಿನ್ನ ಸಂಕಲ್ಪಶಶಿ
ಕ್ಷೋಭಿಸಲು ಮೇಲೆದ್ದ ಗುಳ್ಳೆಗಳಿವೆನಿಪಾ
ಬ್ರಹ್ಮಾಂಡಕೋಟಿಯಿಂ ತುಂಬಿಯೂ ನಿನ್ನುದರಂ
ಎಂತೊ ಕಿಂಕರಸತ್ಯ ಕೃಶವೆ ಇಹುದು? ॥ ೩೮ ॥

ವತ್ಸಪೀಠದಮೇಲೆ ವಕ್ಷದಲಿ ನೆಲೆಗೊಂಡ
ಲಕ್ಷ್ಮಿ ಕಾಲಿಡಲಿರುವ ಪೀಠದಂತೆ
ನಿನ್ನ ನಾಭಿಯ ಕಮಲವದು ಶೋಭಿಸುತ್ತಿಹುದು
ನಡುವೆ ನೆಲಸಿದ ದುಂಬಿ ಬ್ರಹ್ಮನೆನಲು—ಓ ದೇವ! ॥ ೩೯ ॥

ಮಧುಕೈಟಭಾಸುರರ ಹಿಂಡುವಾಗಿನ ಹರಿದ
ನೆತ್ತರಿಂ ಕೆಂಪೇರಿತೆಂಬ ತೆರದಾ
ನಿನ್ನ ಪೀತಾಂಬರದೊಳಳವಟ್ಟು ದನಿ ಗುಡುವುದು
ಉಡಿಗೆಜ್ಜೆ ಮದನಗಜಶೃಂಖಲೆವೊಲು—ಅಚ್ಯುತನೆ ॥ ೪೦ ॥

ದಾಸಾನಾಂ ಸತ್ಯ, ದೃಶ್ಯತೇ
ದಾನವವೀರಾಣಾಂ ದೀರ್ಘನಿದ್ರಾಶಯನಮ್
ತವೋದರಸ್ಥಿತತ್ರಿಭುವನ
ಪ್ರಸಾದಸ್ತಮ್ಭಸಚ್ಛಾಯಂ—ಊರುಯುಗಮ್ ॥ ೪೧ ॥

ಜಾನುಮಣಿದರ್ಪಣೇನ ಚ
ಜಂಘಾಮರಕತಕಳಾಚಿಕಯಾ ಚ ಧನ್ಯಾ
ಅಚ್ಯುತ ನ ಮುಂಚತಿ ಕಾಂತಿಃ
ಲಕ್ಷ್ಮೀರಿವ ಸರೋಜಲಾಂಛನೌ ತವ ಚರಣೌ ॥ ೪೨ ॥

ಶ್ರುತಿಸೀಮಂತಪ್ರಸೂನಂ
ಶೋಭತೇ ನತಸತ್ಯ, ತವ ಸರ್ವಶರಣ್ಯಮ್
ಕ್ರಮಣಕ್ಷಣಜನಿತಸುರನದೀ
ಪ್ರಶಮಿತತ್ರೈಲೋಕ್ಯಪಾತಕಂ ಪದಪದ್ಮಮ್ ॥ ೪೩ ॥

ಇತಿ ತ್ರಿಭುವನೈಕಮೂಲ
ಮಾಸ್ವಾದಯಂತ್ಯನಘಾ ಅಮೃತಸ್ವಾದು ರಸಮ್
ಓಷಧಿಮಹೀಧರಪಾರ್ಶ್ವೇ
ಉದಿತಂ ತ್ವಾಮೌಷಧಮಿವ ದಾಸರುಜಾಮ್ ॥ ೪೪ ॥

ಸಿದ್ಧಾಂಜನಮಿವ ಶ್ಯಾಮಾಂ
ತವ ತನುಂ ನಿಜವಿಲೋಚನೇಷು ಕ್ಷಿಪಂತಃ
ಅಚ್ಯುತ ಲಕ್ಷ್ಮೀನಿವಾಸಂ
ನಿತ್ಯನಿಗೂಢಂ ನಿಧಿಮಿವ ಪಶ್ಯಂತಿ ತ್ವಾಮ್ ॥ ೪೫ ॥

ವಿಘಟಿತನಿಬಿಡಾಂಧಕಾರೋ
ಘಟಮಾನಜ್ಯೋತಿಸ್ತ್ರಿಲೋಕೈಕಗ್ರಹಪತಿಃ
ದೃಷ್ಟಿಗತೋ ಯೇಷಾಂ ತ್ವಂ
ನಮುತ್ಸತ್ಯ, ನ ಖಲು ತೇಷಾಂ ಮೋಹತ್ರಿಯಾಮಾ ॥ ೪೬ ॥

ದನುಜವೀರರ ದೀರ್ಘಶಯನಕ್ಕೆ ಸೆಜ್ಜೆಯೆನೆ
ಹೆಸರಾಂತ ನಿನ್ನೆರಡುತೊಡೆಗಳಚ್ಯುತನೆ !
ನಿನ್ನುದರದಲ್ಲಿರುವ ಮೂಲೋಕದೋವರಿಯ
ಕಂಬಂಗಳೆರಡೆನಲು ಶೋಭಿಸುತಿವೆ ॥ ೪೧ ॥

ರನ್ನಗನ್ನಡಿಯಂತೆ ಜಾನು ಕಣ್ಗೊಳಿಸುತಿರೆ.
ಪಚ್ಚೆಮಣಿ ಪಡಿಗವೆನೆ ಜಂಘೆ ಮೆರೆಯುತಿರೆ
ಕಮಲಲಾಂಛನದಿಂದ ಕಳೆ ಮಿಕ್ಕ ನಿನ್ನಡಿಯ
ನುಳಿಯದಿಹುದೈ ಕಾಂತಿ ಲಕ್ಷ್ಮಿಯಂತೆ—ದೇವ ॥ ೪೨ ॥

ವಿಕ್ರಮಿಸಿ ಲೋಕಗಳನಳೆವಂದು ಜನಿಯಿಸಿದ
ಗಂಗೆಯಿಂ ಮೂಜಗದ ಪಾಪವನು ನೀಗಿ
ಶೋಭಿಪುದು ಶ್ರುತಿಸತೀಸೀಮಂತಕುಸುಮವೆನೆ
ನತಸತ್ಯ ನಿನ್ನ ಚರಣಾರವಿಂದಂ—
ಸರ್ವಶರಣವೆನಿಪ್ಪ ಬಿರುದಿನಿಂದಂ ॥ ೪೩ ॥

ದಾಸಜನರೆಲ್ಲ ಬೇಗೆಗೆ ಮದ್ದು ! ಮೂಲೋಕ
ದೇಕಮೂಲಂ ಸುಧೆಯ ರಸಕಮಿಂಪೆಂದು
ವಿಮಲೌಷಧಾಚಲದ ಮಗ್ಗುಲಲಿ ಮೂಡಿರ್ದ
ನಿನ್ನನೇ ಸೇವಿಸುವರನಘರೊಲಿದು—ಓ ಪ್ರಭುವೆ ॥ ೪೪ ॥

ಸಿದ್ಧಾಂಜನದವೋಲು ಶ್ಯಾಮವಹ ನಿನ್ನೊಡಲ
ತಮ್ಮ ನಯನಂಗಳಲಿ ಜೋಡಿಸುತ್ತ
ಗೂಢನಿಧಿಯಂತೆಸೆವ ಲಕ್ಷ್ಮೀನಿವಾಸನಂ
ನಿನ್ನನಚ್ಯುತ ಕೆಲರು ಕಾಣ್ಬರಯ್ಯ ॥ ೪೫ ॥

ದಟ್ಟಗತ್ತಲೆ ತೊಲಗೆ, ಜ್ಯೋತಿ ಸುತ್ತಲು ಬೆಳಗೆ,
ಮೂರು ಲೋಕಕ್ಕೊಬ್ಬ ಸೂರ್ಯನಹ ನೀನು
ದೃಷ್ಟಿಗೋಚರನೆನಿಸೆ ಕಂಡವರಿಗಿನ್ನುಂಟೆ
ಜಗದೀಶ ಮೋಹದಾ ಮಬ್ಬು ಬಳಿಕ ? ॥ ೪೬ ॥

ವಿಷಯರಸೇ ಸ್ವಪಂತೋ
ವಿಕಾರಜನನ್ಯೈರಪಿ ಚ ನ ಖಲು ವಿಕ್ರಿಯಮಾಣಾಃ
ಜೀವನ್ಮುಕ್ತಸದೃಶಾಃ
ಅಚ್ಯುತ ದೃಶ್ಯಂತೇ ಪಾವನಾಸ್ತವ ಭಕ್ತಾಃ ॥ ೪೭ ॥

ಗಂಧರ್ವನಗರ ಸ್ವಪ್ನ
ಸದೃಕ್ಷಾಣಾಂ ಶ್ರಿಯಾಂ ವನಸರಿತಾವ್
ನ ಸ್ಮರತಿ ತ್ವದ್ಗೃಹೀತಃ
ಶರಣಾಗತಸತ್ಯ, ಸದಾಮುದೋ ಜೀವಗಜಃ ॥ ೪೮ ॥

ನ ಮುಹಯಂತಿ ಜ್ಞಾನವಂತಃ
ತರಂಗ ಡಿಂಡೀರ ಬುದ್ಬುದ ಸದೃಕ್ಷಾಣಿ
ವಿಧಿಪ್ರಮುಖಾಣಾಂ ಪದಾನಿ
ಘನಕಂದಲಿಕಂದಕದಳೀಸ್ತಂಭಸಮಾನಿ ॥ ೪೯ ॥

ದೃಷ್ಟಸ್ವಪರಸ್ವಭಾವಾಃ
ಪುರುಷಾ ಗೃಹೀತ್ವಾ ಸ್ವಾಮಿನಸ್ತವಶೀಲವ್
ನಾಥ ನತಸತ್ಯ ಸಘೃಣಾ
ನ ಮುಂಚಂತಿ ಕಥಮಪಿ ಸರ್ವಜನಸೌಹಾರ್ದವ್ ॥ ೫೦ ॥

ಮಾನಮದೇರ್ಷ್ಯಾಮತ್ಸರ
ದಮ್ಭಾಸೂಯಾಭಯಾಮರ್ಷಲೋಭಮುಖಾಃ
ದೃಶ್ಯಂತೇ ನ ಮೋಹಸುತಾಃ
ದೋಷಾಃ ದಾಸಾನಾಂಸತ್ಯ ತವ ಭಕ್ತಾನಾವ್ ॥ ೫೧ ॥

ಯೇಷಾಂ ಮತಿರಿತರಮುಖೀ
ಕಾಲಃ ಸಕಲೋಽಪಿ ತೇಷಾಂ ಕಲಿ ವಿಸ್ತಾರಃ
ಯೇ ತವ ಪದೇ ಪ್ರವಣಾಃ
ನಾಸ್ತಿ ಕಲಿರ್ನಾಗಪತಿನಗರಪತೇ, ತೇಷಾವ್ ॥ ೫೨ ॥

ಇಂದ್ರಿಯಂಗಳ ವಿಷಯದಲಿ ನಿದ್ರಿಸುವರಾಗಿ
ಯಾವ ವಿಕೃತಿಗು ಮನದೊಳೆಡೆಯ ಕೊಡದಂತೆ
ದೇವ ! ಜೀವನ್ಮುಕ್ತರಂತೆ ತೋರುತಲಿಹರು
ಪಾವನರು ನಿನ್ನವರು ಭಕ್ತಜನರು || ೪೭ ||

ಗಂಧರ್ವನಗರದಂತಿರೆ ಮತ್ತೆ ಕನಸಿನೊಲು
ತೋರಿ ಹಾರುವ ಜೇರೆಯೆಲ್ಲ ಬಗೆಯಾದ
ಕಾಡುತೊರೆಗಳ ಸಿರಿಯ ನೆನಹು ಬರುವುದುಮುಂಟೆ
ನಿನ್ನಹಿಡಿತದ ಮತ್ತ ಜೀವಗಜಕೆ—ದೇವ || ೪೮ ||

ತೆರೆಯಂತೆ ನೊರೆಯಂತೆ ನೀರ್ಗುಳ್ಳೆಯಂತೆಯೂ
ಕೊಡನಾರಿ ಕಂದಳಿಯಗೆಡ್ಡೆ ಬಾಳೆವೊಲು
ಅಚಿರವೆನ್ನುತೆ ಬ್ರಹ್ಮಮುಖ್ಯರಾ ಪದವಿಯನು
ಕಡೆಗಣಿಸಿ ನಡೆವರೈ ತಿಳಿದ ಜನರು || ೪೯ ||

ಸ್ವಪರಸ್ವಭಾವವನು ಕಂಡರಿತ ಸಜ್ಜನರು
ನಿನ್ನ ಘನಶೀಲವನು ನೆನೆದು ಕೈಕೊಂಡು
ತಮ್ಮಲ್ಲಿ ತಾಂ ನಾಚಿ ನಡೆಯುವರು ಸತಸತ್ಯ !
ಸರ್ವಜನ ಸೌಹಾರ್ದದಿರವ ಬಿಡದೆ || ೫೦ ||

ಮಾನಮದದಂಭಮತ್ಸರಭಯಾಸೂಯೆಗಳು
ಕರುಬು ಹೋರಟೆ ಲೋಭವೆಂಬ ಹೆಸರುಳ್ಳ
ಮೋಹಸಂತಾನಗಳು ದೋಷಗಳು ಕಾಣಿಸವು
ದಾಸಸತ್ಯನೆ ! ನಿನ್ನ ಭಕ್ತಜನದಿ || ೫೧ ||

ನಿನ್ನನುಳಿದನ್ಯದಲಿ ಹರಿವ ಚಿತ್ತದ ಜನಕೆ
ಯೆಲ್ಲಕಾಲವು ನೋಡೆ ಕಲಿಯೊಂದು ಹರಹು
ಭಜಗೇಂದ್ರನಗರೇಶ ! ನಿನ್ನಪದದಲಿ ನಟ್ಟ
ಮನದವರಿಗಿಲ್ಲವೈ ಕಲಿಯ ಕುರುಹು || ೫೨ ||

ಅತ್ಯಾಸನ್ನವಿನಾಶಾ
ಅಚ್ಯುತ ಪಶ್ಯಂತಿ ತಾವಕೇ ಭಕ್ತಜನೇ
ಮೋಕ್ಷರುಚೀನಾಂ ಸುಮಾರ್ಗೇ
ಮೂಢಾ ದಿವಸಕರಮಂಡಲ ಇವ ಛಿದ್ರಮ್ || ೫೩ ||

ನಿತ್ರುಟಿತದುರ್ಮಾನಘನಾಃ
ನಿರ್ಮಲಗುಣಘಟಿತತಾರಕಾಪ್ರಾಗ್ಭಾರಾಃ
ಭಾಸಮಾನಭಕ್ತಿಜ್ಯೋತ್ಸ್ನಾಃ
ನತಸತ್ಯ, ಸ್ಫುರಂತಿ ನಭೋನಿಭಾಸ್ತವ ಭಕ್ತಾಃ || ೫೪ ||

ನ ಖಲು ಯಮವಿಷಯೇ ಗತಿಃ
ನತಸತ್ಯ, ಪದಾಂಬುಜಂ ತವ ಪ್ರಪನ್ನಾನಾಮ್
ಸ್ಖಲಿತಾನಾಮಪಿ ಯಥಾಯೋಗ್ಯಂ
ಶಿಕ್ಷಾ ಶುದ್ಧಾಂತಕಿಂಕರಾಣಾಮಿವ ಲಕ್ಷ್ಮೀ || ೫೫ ||

ಕರ್ಮಗತಿದೋಷದುಃಖಿತಾಃ
ಕೃತಾಂತಭ್ರುಕುಟೀಭುಜಂಗೀದರ್ಶನತ್ರಸ್ತಾಃ
ಅರ್ಚಂತಿ ತವ ಚರಣೌ
ಅಚ್ಯುತ ಪ್ರಭ್ರಷ್ಟಮನ್ಮಥರಸಾಸ್ವಾದಾಃ || ೫೬ ||

ಅಲಗತಿ ತವ ಚರಣೌ
ಅಚ್ಯುತ ವಿಧಿನಾಭ್ಯರ್ಚನಾಽಽಚರಿತಾ
ಯೈಕಾಂತಿ ಪ್ರಯುಕ್ತಾ
ಶೇಷಾಮಿವ ಸ್ವಯಂ ಶಿರಸಾ ಪ್ರತಿಗೃಹ್ಣಾಸಿ ತಾಮ್ || ೫೭ ||

ತವ ಮುಖಜ್ಯೋತ್ಸ್ನಾ
ದ್ರಾವಿತಮಾನಸಶಶಿಕಾಂತಪ್ರವಾಹ ಸನ್ನಿಭ ಬಾಷ್ಪಾನ್
ಅಚ್ಯುತ ನ ಮುಂಚಸಿ ಭಕ್ತಾನ್
ಕದಂಬಗೋಳನಿಭ ಕಂಟಕಾಯಮಾನ ನಿಜಾಂಗಾನ್ || ೫೮ ||

ಮೋಕ್ಷಕಾಂಕ್ಷೆಯಜನರ ಮಾರ್ಗವೆನೆ ಹೆಸರಾದ
ದಿನಕರನ ಮಂಡಲದೆ ಛಿದ್ರವನು ಕಾಣ್ಬ
ಮೂಢರಂತಿರೆ ಕೇಡುಗಾಲವು ಸಮಾಪಿಸಿದ
ಜನರು ತಪ್ಪೆಣಿಸುವರು ನಿನ್ನವರಲಿ ॥ ೫೩ ॥

ದೂರ ದೂಡಿದರಾಗಿ ಹಮ್ಮು ಬಿಮ್ಮುಗಳೆಂಬ
ಮೋಡಗಳನಮಲಗುಣ ತಾರಕಾಗಣವ
ಕೆಳೆಗೊಂಡು ಭಕ್ತಿಯಾ ಬೆಳುದಿಂಗಳಿಂ ಕೂಡಿ
ಹೊಳೆಯುವರು ನಿನ್ನವರು ಗಗನದಂತೆ ॥ ೫೪ ॥

ನಿನ್ನಡಿಯ ತಾವರೆಯ ಶರಣುಹೊಂದಿದ ಜನಕೆ
ಜವನ ಹಿಡಿತಕೆ ಸಲುವ ಭೀತಿಯಿಲ್ಲ ವಿಭೂ !
ಜಾರಿದರಿಗೂ ಸಲ್ವುದರಮನೆಯ ಕಿಂಕರರ
ಲೋಪಕ್ಕೆ ಸಲುವಂತೆ ಲಘುವೆ ಶಿಕ್ಷೆ ॥ ೫೫ ॥

ಕರ್ಮಗತಿದೋಷದಿಂ ದುಃಖಕ್ಕೆ ಸಿಲುಕಿದರು
ಯಮನ ಹುಬ್ಬಿನ ಹಾವ ನೋಡಿ ಬೆದರಿದರು
ಮನವ ಮಥಿಸುವ ಸುಖದ ರಸದ ಹಾನಿಯ ಕಂಡು
ನಿನ್ನಡಿಗಳನೆ ಕಡೆಗೆ ಪೂಜಿಸುವರೈ--ದೇವ ॥ ೫೬ ॥

ವಿಧಿಯಿಂದಲಾಚರಿಸುವೆಲ್ಲ ಪೂಜೆಯು ದೇವ
ನಿನ್ನ ಚರಣವನೆಯ್ದಿ ಧನ್ಯವೆನಿಸುವುದು
ಸ್ವೀಕರಿಪ ಬಗೆ ಬೇರೆ ! ಶೇಷವಸ್ತ್ರವು ತಲೆಗೆ
ಏಕಾಂತ ಭಕ್ತರರ್ಪಣೆಯು ನಿನಗೆ ! ॥ ೫೭ ॥

ನಿನ್ನ ಮುಖಚಂದ್ರಮನ ಕಾಂತಿಕೌಮುದಿಯಿಂದೆ
ಮನವೆಂಬ ಶಶಿಕಾಂತವೊಸರಿ ಹರಿದಂತೆ
ಸುಖಬಾಷ್ಪದಿಂ ಕೂಡಿ ಮುಳ್ಳಿಡಿದ ಮರದವೊಲು
ಮೈನವಿರಿನಿಂ ನಲಿವ ಭಕ್ತರಂ ಬಿಡೆಯಯ್ ॥ ೫೮ ॥

ಸರ್ವೇಷ್ವಪಿ ನಿರ್ವೈರಾಃ
ಶರಣಾಗತಸತ್ಯ, ಗೃಹೀತಶಾಶ್ವತಧರ್ಮಾಃ
ಗತಸಂಗಾಸ್ತವ ಭಕ್ತಾಃ
ಯಾಂತಿ ತ್ವಾಮೇವ ದುರ್ಲಭಮಿತರೈಃ || ೫೯ ||

ಅಹಿಪತಿನಗರೇಂದ್ರ, ತ್ವಾಂ
ಆಸನ್ನಮಪಿ ಗಗನಮಿವ ಸದಾ ದುರ್ಗ್ರಹಮ್
ವಿಷಯೇಷು ವಿಲಗಂತಃ
ತ್ವರಮಾಣಾ ಅಪಿ ನ ಲಭಂತೇ ಡೋಳಾಯಮಾನಮನಸಃ || ೬೦ ||

ಭಕ್ತಾಸ್ತಾವಕಸೇವಾ
ರಸಭರಿತಾಃ ಸಕಲರಕ್ಷಣೋತ್ಸುಕರುಚಿನಾ
ಕರಣಾನಿ ಧರಂತಿ ಚಿರಂ
ಕಾಂಕ್ಷಿತಮೋಕ್ಷಾ ಅಪ್ಯಚ್ಯುತ, ತ್ವಯಾ ಸ್ಥಾಪಿತಾಃ || ೬೧ ||

ಸ್ಥಿರಗುಣಗಿರಿಜನಿತೈಃ
ಸಂತಾರಯಸಿ ನತಸತ್ಯ, ನಿಜಭಕ್ತೈಃ
ಜನ್ಮಪರಿಪಾಟೀಜಲಧಿಂ
ಜಂಗಮಸ್ಥಿರಸೇತುದರ್ಶನೀಯೈಃ ಜನಾನ್ || ೬೨ ||

ಪ್ರಶಮಿತಭವಾಂತರಭಯಾಃ
ಪ್ರಾಪ್ತಂ ಹಿತಮಿತಿ ಪರಿಪಶ್ಯಂತಃ
ಭಾವಯಂತಿ ತವ ಭಕ್ತಾಃ
ಪ್ರಿಯಾತಿಥಿಮಿವ ನತಸತ್ಯ, ಪಶ್ಚಿಮದಿವಸಮ್ || ೬೩ ||

ಪ್ರಕಟತಿಮಿರೇ ಭುವನೇ
ಪಾತ್ರಪ್ರತಿಷ್ಠಾಪಿತಪರಮಜ್ಞಾನಪ್ರದೀಪಾಃ
ನೀಯಂತೇಽಚ್ಯುತ, ತ್ವಯಾ
ನಿಜಂ ಪದಂ ಸದಾ ಸ್ವಯಂಪ್ರಭಂ ಕೃತಕಾರ್ಯಾಃ || ೬೪ ||

ಆರೊಳಗು ಹಗೆಯಿಲ್ಲದಚಲಧರ್ಮವ ಹಿಡಿದು
ನಿರ್ಮುಕ್ತಸಂಗರೆನೆ ಹಿರಿಪೊಲ್ತು ನಡೆದು
ಇತರರಿಗೆ ದುರ್ಲಭನೆನಿಪ್ಪ ನಿನ್ನನೆ ದೇವ
ಹೊಂದುವರು ನಿನ್ನವರು ಭಕ್ತ ಜನರು ॥ ೫೯ ॥

ಅಹಿಪತಿ ಪುರೇಶ್ವರನೆ ! ನೆರೆಯೊಳಗೆ ನೀನಿಪ್ಪು
ಗಗನದಂತಿರೆ ಮುಟ್ಟೆ ಶಕ್ತರಾಗದೊಲು
ವಿಷಯಂಗಳಲಿ ತೊಡಕಿದುಯ್ಯಾಲೆಮನದವರು
ನಿನ್ನಪಡೆಯರು ಬಯಸಿ ಸಡಗರಿಸಿಯೂ ॥ ೬೦ ॥

ನಿನ್ನ ಸೇವಾಹರ್ಷ ರಸಭರಿತರಾದವರು
ಮೋಕ್ಷಕಾಂಕ್ಷೆಯು ತಮಗೆ ಹಿರಿದಾಗಿ ಸಲೆಯೂ
ಸಕಲರಕ್ಷಣಕುತೂಹಲದ ನಿನ್ನಿಚ್ಛೆ ಸಲೆ
ಉಳಿವರೈ ಚಿರವಿಲ್ಲಿ ತನುವ ಧರಿಸಿ ॥ ೬೧ ॥

ಸ್ಥಿರಸುಗುಣರಾಶಿಯೇ ಗಿರಿಶಿಲೆಗಳೆಂದೆನಲು
ನಡೆವ ಸೇತುಗಳಂತೆ ಕೂಡಿ ಕಣ್ಗೊಳಿಪಾ
ನಿಜಭಕ್ತರಂ ಜನರಿಗೊಡವಿಸುತೆ ಹೇ ಪ್ರಭುವೆ
ದಾಟಿಸುವೆ ಸುಲಭದಿಂ ಜನ್ಮಜಲಧಿಯನು ॥ ೬೨ ॥

ತಮಗಿಲ್ಲದಿರೆ ಪುನರ್ಜನ್ಮಭೀತಿಯು ತೊಡಕು
ಬಂದುದೆಲ್ಲವು ಹಿತಕೆಯೆಂಬ ದೃಷ್ಟಿಸಲೆ
ಸ್ವಾಗತಿಸುತುಂ ಪ್ರಿಯಾತಿಥಿಯಂತೆ ಕಡೆಯದಿನ
ವೈತರಲು ಸುಖಿಸುವರು ನಿನ್ನಜನರು ॥ ೬೩ ॥

ಹಬ್ಬಿರುವ ಮಬ್ಬಿನೀ ಜಗದೆ ಸತ್ಪಾತ್ರದಲಿ
ನೆಲೆಗೊಳಿಸಿ ಹಿಡಿದ ಸುಜ್ಞಾನದೀಪವನು
ಕೃತಕೃತ್ಯರೆನಿಸಿರ್ಪ ನತರಂ ಸ್ವಯಂಪ್ರಭೆಯ
ನಿಜಧಾಮಕೊಯ್ಯುವೈ ನೀನೆ ಒಲಿದು—
ಓ ವಿಭುವೆ ! ನಿಜಧಾಮಕೊಯ್ಯುವೈ ನೀನೆ ಒಲಿದು ॥ ೬೪ ॥

ದೃಢತೀವ್ರಭಕ್ತಿನಯನಾಃ
ಪರಿಪಶ್ಯಂತೋಽಹೀಂದ್ರಪುರನಾಥ, ತ್ವಾಂ
ಪ್ರಾಪ್ತಾಸ್ತವ ಸಾಯುಜ್ಯಂ
ಪಂಕ್ತಿಂ ಪೂರಯಂತಿ ಪನ್ನಗೇಂದ್ರಮುಖಾನಾಮ್ || ೬೫ ||

ಸಂನತಸುಲಭಮಚ್ಯುತ,
ಸಮಾಧಿಸೋಪಾನಕ್ರಮವಿಲಂಬವಿಮುಖಿತಾಃ
ಶರಣಂ ಗತ್ವಾ ತ್ವಾಂ
ಮುಕ್ತಾ ಮುಚುಕುಂದ ಕ್ಷತ್ರಬಂಧುಪ್ರಮುಖಾಃ || ೬೬ ||

ದೇವಾನಾಂ ಪಶುಸಮಾನೋ
ಜಂತುಃ ಗತ್ವಾ ದೇವನಾಥ, ತವ ಪದಮ್
ತೈರ್ಯೈವ ಸರ್ವೈಃ ಸಂ
ಸರಮಾಣೈಃ ಭವತಿ ಸದಾ ದತ್ತಬಲಿಃ || ೬೭ ||

ಮೋಹಾಂಧಕಾರಮಹಾರ್ಣವ
ಮೂರ್ಛಿತಮಾಯಾಮಹಾರಜನೀಪ್ರತ್ಯೂಷಃ
ಅಚ್ಯುತ ತವ ಕಟಾಕ್ಷೋ
ವಿಮುಕ್ತಿಪ್ರಸ್ಥಾನಪ್ರಥಮಪರಿಕರಬಂಧಃ || ೬೮ ||

ಮೋಕ್ಷಸುಖವೃಕ್ಷಮೂಲಂ
ಮೋಹಜರಾತುರಮಹಾರಸಾಯನಪ್ರವರಮ್
ಸಕಲಕುಶಲೈಕಕ್ಷೇತ್ರಂ
ಕಿಂಕರಸತ್ಯ, ತವ ಕೀರ್ತನಮಮೃತನಿಭಮ್ || ೬೯ ||

ಒಲವು ತುಂಬಿದ ಕಣ್ಗಳರಳರಳಿ ಹಿಗ್ಗುತಿರೆ
ನಿನ್ನ ಚೆಲುವನು ಹೀರಿ ಹಸಿವ ಹಿಂಗಿಸುತ
ಸಾಯುಜ್ಯವಂ ಪಡೆದು ಫಣಿಪತಿಯೆ ಮೊದಲಾದ
ಸೂರಿಗಳ ಸಾಲ್ಪೊಂಬಿ ನಲಿವರವರು || ೬೫ ||

ಯಮನಿಯಮಮಾಸನಕ್ರಮವು ಪ್ರಾಣಾಯಾಮ
ಪ್ರತ್ಯಾಹೃತಿ ಧ್ಯಾನ ಧಾರಣ ಸಮಾಧಿ
ಎಂಬುವೀ ಮೆಟ್ಟಲ್ಗಳೊಂದೊಂದರೇರಿಕೆಯ
ಕ್ರಮದಿಂ ವಿಲಂಬಕ್ಕೆ ಕಾರಣವದಾದ
ಯೋಗ ಮಾರ್ಗಾವಲಂಬನಕೆ ಜಿದರುತೆ ದೇವ
ನಿನಗೆ ಹೊರೆಯೊಪ್ಪಿಸುವ ಶುಭಪಥವ ಹಿಡಿದು
ಶರಣೆಂದು ನಿನಗೆ ನಮಿಸುತ್ತೆ ಮುಚುಕುಂದನುಂ
ಕ್ಷತ್ರಬಂಧುಮುಖರೂ ಗತಿವಡೆದರೈ || ೬೬ ||

ಪಶುವಿಂಗೆ ಸಮನೆಂದು ದೇವತೆಗಳೆಣಿಸಿದ್ದ
ಜಂತುವೂ ದೇವೇಶ ನಿನ್ನಪದವೊಂದಿ
ಸಂಸಾರಚಕ್ರದಲಿ ತೊಳಲುವವರಿಂದಲೇ
ಪೂಜೆಯಂ ಪಡೆಯುವನು ತಾನೆ ನಿತ್ಯ || ೬೭ ||

ಕಣ್ಗೆಡಿಪ ಮೋಹವಮುಬ್ಬಿಸ ಕಡಲ ಬವಳಿಯಾ
ಮಾಯಾಮಹಾರಾತ್ರಿ ಕೊನೆಗೊಳ್ಳುವುಷೆಯು
ಪರಮಪದವಿಯು ನೆಲೆಗೆ ಪೊರಮಡುವ ಮೊದಲಿನಣಿ
ಅಚ್ಯುತನೆ ! ನಿನ್ನೊಲಿದ ನೋಟವರಿಯೆ || ೬೮ ||

ಮುಕ್ತಿಸುಖವೃಕ್ಷಕ್ಕೆ ಮೂಲವದು, ಮೋಹದಾ
ಮುಪ್ಪುಬೇನೆಗಳಳಿಯೆ ವರರಸಾಯನವು,
ಎಲ್ಲ ನಲ್ಮೆಗಳೊಂದು ನೆಲೆವೀಡು, ಸತಸತ್ವ,
ನಿನ್ನ ಕೀರ್ತನಮಮೃತ ಸದೃಶವೈ ಪ್ರಭುವೇ || ೬೯ ||

ನಾಸ್ತ್ಯಭಿಕ್ರಮನಾಶೋ
ವಿಚ್ಛೇದೇಽಪಿ ನ ಪ್ರತ್ಯವಾಯಪ್ರಸಂಗಃ
ಸ್ವಲ್ಪಾಪಿ ತವ ಸಪರ್ಯಾ
ರಕ್ಷತ್ಯಚ್ಯುತ ಮಹತ್ತರಾದ್ಭಯಾತ್ ॥ ೭೦ ॥

ಅಪ್ರಸಾದೇ ಅಪ್ರಸನ್ನಾಃ
ತವ ಪ್ರಸಾದೇ ದಾಸಸತ್ಯ, ಪ್ರಸನ್ನಾಃ
ಆರಾಧ್ಯಾ ಭವಂತಿ ಪರೇ
ಕಿಂ ತೈಃ ಪ್ರಸಂಗಲಂಭಿತಪ್ರಭಾವೈಃ ॥ ೭೧ ॥

ಇತರತ್ರಿದಶಾಃ ಪ್ರಸನ್ನಾಃ
ಕಿಂಕರಸತ್ಯ, ಮಮ ಕಿಂನು ಕರಿಷ್ಯಂತಿ ಹಿತಮ್
ನೀಹಾರಘನಶತೈಃ ನ ಖಲು
ಪೂರ್ಯತೇ ಕಥಮಪಿ ಚಾತಕ ತೃಷ್ಣಾ ॥ ೭೨ ॥

ಅನುಗತಸುಖಮೃಗತೃಷ್ಣಾ
ಅಚ್ಯುತ ವಿಶ್ರಾಮ್ಯತಿ ತವ ಮಾಮಕ ತೃಷ್ಣಾ
ಪ್ರವಾಹೇಷು ಪ್ರಸೃತಾಯಾ
ಆಶ್ರಿತಪ್ರವಹದ್ಘನಕೃಪಾಸರಿತಃ ॥ ೭೩ ॥

ವಿಕಲಸಕಲಾಂಗ ವಿಷಮಾನ್
ಧರ್ಮಾನ್ ನತಸತ್ಯ ಧ್ವಜನಿಭಾನ್ ಧಾರಯನ್
ಕಾಂತಾರಪಾಂಥಕ ಇವ
ಸ್ಖಲಚ್ಚರಣೋಽಸ್ಮಿ ಕಾತರವಿಶೀರ್ಯಮಾಣಃ ॥ ೭೪ ॥

ಸ್ಥಿರ ಧರ್ಮವರ್ಮಸ್ಥಗಿತಂ
ಅಧರ್ಮಪ್ರವಣಾನಾಮುಗ್ರಸ್ಕಂಧ ಪ್ರವೃತ್ತಮ್
ಅಘಟಮಾನವಿಪ್ರತೀಸಾರಂ
ಅಚ್ಯುತ, ಮಾಂ ಹಸಸಿ ನೂನಂ ಲಕ್ಷ್ಮೀಸಮಕ್ಷಮ್ ॥ ೭೫ ॥

ಮೊದಲು ಮಾಡಲು ಹಿರಿಯ ತೊಡಕಾವುದೂ ಇಲ್ಲ
ನಡುವೆ ನಿಂತರು ಮತ್ತೆ ದೋಷಕೆಡೆಯಿಲ್ಲ !
ಸ್ವಲ್ಪವಾದರು ದೇವದೇವ, ನಿನ್ನಯ ಪೂಜೆ
ಹಿರಿಯ ಭಯವನು ಕಳೆದು ಕಾಪಿಡುವುದೈ ॥ ೭೦ ॥

ನೀನಪ್ರಸನ್ನನಾಗಿರಲು ಮುಳಿವರು ಪರರು
ನಿನ್ನಯ ಹಸಾದದಲಿ ಸಕಲರ ಹಸಾದ
ನೆವವ ಮುಂದಿಟ್ಟೊಲಿವ ಮುಳಿಯುವಂಥವರಿಂದೆ
ನಮಗಾಗಬೇಹುದೇಂ ಪೂಜೆಯಿಂ ತಂದೆ ? ॥ ೭೧ ॥

ಅಚ್ಯುತಪ್ರಭುವೆ ಬೇರೆಲ್ಲದೇವತೆಗಳೂ
ಒಲಿದೆನಗೆ ಮಾಡುವಾ ಹಿತವದೇನೈಯ ?
ಹಿರಿಯ ಮಂಜಿನ ರಾಶಿ ನೂರಾರು ಕೂಡಿಯೂ
ಚಾತಕದ ಬಾಯಾರು ಹರಿದು ತಣಿವಹುದೇ ? ॥ ೭೨ ॥

ಬಿಸಿಲುದೊರೆಯನು ನಂಬಿ ನಡೆದು ಬವಣೆಗೆ ಸಿಲುಕಿ
ಬೇಯುತಿರುವೆನ್ನ ಸಂತಾಪವೆಲ್ಲವದು
ಶಮನವೊಂದುವುದೈಯ ಸಂಶ್ರಿತರ ಕಡೆಗೊಲಿದು
ಧಾವಿಸುವ ನಿನ್ನ ಕರುಣಾಪ್ರವಾಹದಲಿ ॥ ೭೩ ॥

ಹುರುಳನರಿಯದೆ ಹಲವು ವಿಷಮಧರ್ಮಂಗಳನು
ಧ್ವಜದಂತೆ ಹಿಡಿಯುತ್ತ ನಡೆದತ್ತಲಿತ್ತ
ಎಂತೊ ಅಡವಿಗೆ ನುಗ್ಗಿ ಹಾದಿಯರಿಯದೆ ತೊಳಲಿ
ಅಡಿಗಡಿಗೆ ಜಾರುತಿಹ ದೀನನಂತಿಹೆನೈ ॥ ೭೪ ॥

ಅಚಲಧರ್ಮದೆ ನಡೆವನಂತೆ ಸೋಗನು ಹಾಕಿ
ಧರ್ಮಹೀನರೊಳಗ್ರಗಣ್ಯನೆನೆ ಸಲುತ
ಪ್ರತಿಕೃತಿಗೆ ದೂರನೆನೆ ನುಸುಳುತಿರುವೀಯೆನ್ನ
ಸಿರಿಯ ಸನ್ನಿಧಿಯಲ್ಲಿ ತೋರಿ ನಗುವೈ ॥ ೭೫ ॥

ತರಿತುಮಚ್ಯುತ ದುರಿತಂ
ಅಸ್ಮಿನ್ ದೇಹೇ ಏಕ ದಿವಸೇಽಪಿ ಕೃತಮ್
ಕಾಲೋಽಲಂ ನ ಸಕಲಃ
ಕರುಣಾಯಾಸ್ತವ ಪೂರ್ಣಪಾತ್ರಮಸ್ಮ್ಯಯಮ್ ॥ ೭೬ ॥

ಅಚ್ಯುತ, ತವ ಗುಣಾನಾಂ
ಮಮ ದೋಷಾಣಾಮಪಿ ನಾಸ್ತಿ ಕುತ್ರಾಪಿ ಗಣನಾ
ತಥಾಪಿ ಜಯಃ ಪ್ರಥಮಾನಾಂ
ಅಧಿಕಂ ಲೀನಾನಾಂ ಭವತಿ ನ ಖಲು ದೌರ್ಬಲ್ಯಮ್ ॥ ೭೭ ॥

ರಾತ್ರಿಂ ದಿವಸಮಚ್ಯುತ
ತ್ರುಟಿತಪತಂತ್ಯಾಯುದ್ರುಮಖಂಡಾನಿ
ದೃಷ್ಟ್ವಾಪಿ ದೃಪ್ತಮನಸಂ
ಬಾಲಮಿದಾನೀಮಪಿ ಭರಸ್ವ ಮಾಂ—ಅಪ್ರಮತ್ತಃ ॥ ೭೮ ॥

ನಿಃಶ್ವಾಸಶಂಕನೀಯೇ
ದೇಹೇ ಪಟಲಾಂತಸಲಿಲಬಿಂದುಸದೃಕ್ಷೇ
ಜಾನಾಸಿ ನತಸತ್ಯ, ತ್ವಂ
ಮಾಂ ಜರತ್ಕರಣೇಽಪಿ ದೀರ್ಘಯೌವನತೃಷ್ಣಮ್ ॥ ೭೯ ॥

ಅಜ್ಞಾತನಿಜಕರ್ತವ್ಯಂ
ತಿಲಾಗ್ರಜ್ಞಾತೇಷು ಮಾಮಪಿ ಪ್ರತಿಕೂಲಗತಿಮ್
ಇತಿ ನಿಜಸ್ವಭಾವವ್ರೀಳಿತಂ
ಹಾತುಂ ದಾಸಾನಾಂ ಸತ್ಯ, ನ ಖಲು ತವ ಯುಕ್ತಮ್ ॥ ೮೦ ॥

ಕೋಽಹಂ ಕಿಂ ಕರಣೀಯಂ
ಪರಿಹರಣೀಯಮಪಿ ಕಿಮಿತಿ ಜಾನಾಸಿ ಸರ್ವಮ್
ಶಕ್ನೋಷಿ ಚ ತದ್ಧಿತಂ ಮಮ
ತ್ರಿದಶೇಶ್ವರ ಕುರುಷ್ವ ನಿಜಹೃದಯನಿಕ್ಷಿಪ್ತಮ್ ॥ ೮೧ ॥

ಒಂದುದಿನವೀದೇಹದಿಂ ಮಾಡಿದಾ ಪಾಪ
ಕಳಿಯೆ ಸಾಲದು ಕಾಲವೆಲ್ಲವೂ ನಾಥ !
ನಿನ್ನ ಕರುಣೆಗೆ ಪೂರ್ಣಪಾತ್ರನೈ ; ಅದರಿಂದೆ
ಕೈಬಿಡದೆ ಸಲಹೈಯು ಶರಣರೊಡೆಯಾ || ೭೬ ||

ಎಣಿಕೆಗೊದಗವು ದೇವ, ನಿನ್ನ ಸುಗುಣದ ರಾಶಿ
ಲೆಕ್ಕಿಸಲು ಶಕ್ಯವಿಲ್ಲೆನ್ನ ದೋಷಗಳೂ
ಆದರೇನೈ ಮೊದಲು ನುಡಿದುವೇ ಗೆಲ್ಲುವುವು
ಹಿರಿಯರನು ಸೇರಿದರಿಗುಂಟೆ ಸೋಲು ? || ೭೭ ||

ಮುರಿಮುರಿದು ಬೀಳುತ್ತಲಿಹುವು ಹಗಲೂ ಇರುಳು
ತನುವಿನಾಯುಸ್ಸೆಂಬ ಮರದ ತುಣುಕುಗಳು
ಕಂಡು ಕಂಡೂ ಕೊಬ್ಬು ಕೊರೆಯಾಗದಳಿಮನದ
ಮರುಳನಂ ಭರಿಸೈಯು ಮರೆಯದೀಗ—ಓ ವಿಭುವೆ || ೭೮ ||

ಅರಿವೆಯುಂಚಿನೊಳುಳಿದ ನೀರ ಬಿಂದುವಿನಂತೆ
ಉಸಿರೊಂದೆ ಕುರುಹಾದ ದೇಹವಿವರಲ್ಲಿ
ಕರಣಗಳು ಕುಗ್ಗಿಯೂ ನಿಡುಜನ್ಮನಕ್ಕಾಗಿ
ಬಯಸುತಿರುವೆನ್ನ ನೀಂ ಬಲ್ಲೆ ವಿಭುವೇ || ೭೯ ||

ಮಾಡಬೇಹುದಸರಿಯೆಂ—ಎಳ್ಳನೊನೆಯಷ್ಟರಿತ
ವಿಷಯದಲ್ಲಿಯು ಅಡ್ಡ ಹಾದಿಯನೆ ಹಿಡಿವೆಂ
ಎನ್ನ ನಡೆಗಾನೆ ನಾಚುತ್ತಿಹೆನೊ ! ನತಸತ್ಯ,
ಕೈಬಿಡಲು ಸಲ್ಲದೈ ಕರುಣೆಯೊಡೆಯಾ || ೮೦ ||

ನಾನಾರು, ಮಾಡತಕ್ಕುದದೇನು, ಮೇಣಿಲ್ಲಿ
ಬಿಡತಕ್ಕುದೇನೆಂಬುದೆಲ್ಲವನು ಬಲ್ಲಯ್
ಎನಗೆ ಹಿತವಾಚರಿಸೆ ಶಕ್ತನಹೆ ದೇವೇಶ !
ನಿನ್ನ ಮನಸೇನುಂಟೊ ಅಂತು ನಡೆಸೈ || ೮೧ ||

ಇದಾನೀಮುಪರ್ಯುಪರ್ಯಸ್ಯಯಂ
ಗುಣಗೃಹೀತೋ ದಾರುಪುತ್ರಕ ಇವ ಪರವಶಃ
ತಸ್ಯಾಪಿ ಮಮ ತ್ರಿದಶೇಶ್ವರ
ತ್ರಿಷ್ವಪಿ ಕರಣೇಷು ಭವ ಸುಖ ಸಂಕಲ್ಪಃ ॥ ೮೨ ॥

ನಿಜಕರ್ಮನಿಗಳಯುಗಳಂ
ಅಚ್ಯುತ, ಕೃತ್ವಾ ಮಮ ಪ್ರಿಯಾಪ್ರಿಯವರ್ಗೇ
ಕದಾ ಘೋರಕಳೇಬರ
ಕಾರಾಗೃಹಕುಹರನಿರ್ಗತಂ ಕರಿಷ್ಯಸಿ ಮಾಮ್ ॥ ೮೩ ॥

ಹಾರ್ದೇ ತ್ವಯಿ ಕದಾ
ವಿಶ್ರಾಂತಂ ಬ್ರಹ್ಮಧಮನಿಮಾರ್ಗೇಗಮಿಷ್ಯಂತಮ್
ದಿನಕರದತ್ತಾಗ್ರಕರಂ
ಅಚ್ಯುತ ದ್ರಕ್ಷ್ಯಸಿ ದಯಿತಡಿಂಭಮಿವ ಮಾಮ್ ॥ ೮೪ ॥

ಕದಾ ಅಮಾನವಾಂತಾಃ
ಅಗ್ನಿಮುಖಾ ಆತಿವಾಹಿಕಾಸ್ತವಪುರುಷಾಃ
ಅತಿಲಂಘಯಿಷ್ಯಂತಿ ಮಾಂ
ಅಚ್ಯುತ ತಮೋಗಹನತ್ರಿಗುಣಮರುಕಾಂತಾರಮ್ ॥ ೮೫ ॥

ಲಂಘಿತವಿರಜಾಸರಿತಂ
ಲಂಭಿತಸದಾಶುದ್ಧಸತ್ತ್ವಮಯ ಸೌಮ್ಯತನುಮ್
ಕೃತಬ್ರಹ್ಮಾಲಂಕಾರಂ
ಕರಿಷ್ಯಸಿ ನತಸತ್ಯ, ಕಿಂಕರಂ ಕದಾ ಮಾಮ್ ॥ ೮೬ ॥

ಸಂಸಾರಸಾಗರಾದುತ್ಕ್ಷಿಪ್ತಂ
ತ್ರಿದಶನಾಥ, ಸ್ಫುರಿತಾಲೋಕಮ್
ಕದಾ ಕರಿಷ್ಯಸಿ ಹೃದಯೇ
ಕೌಸ್ತುಭಮಣಿದರ್ಪಣಮಿವ ಲಕ್ಷ್ಮೀದೃಷ್ಟಮ್ ॥ ೮೭ ॥

ನಿನ್ನ ಗುಣದಲಿ ಸಿಲುಕಿ ಯಿಾಗಲೂ ಮುಂದೆಯೂ
ಸೂತ್ರಧಾರನ ಕೈಯ ಬೊಂಬೆ ನಾನಯ್ಯ
ಪರವಶತೆಯಿಂತಿರಲು ನಿನ್ನಿಷ್ಟದಂತೆನ್ನ
ಕುಣಿಸಿ ಸುಖಿಸೈ ವಿಭುವೆ ಕರಣಮೂರರೊಳು || ೮೨ ||

ಪುಣ್ಯಪಾಪಗಳೆಂಬ ಕೋಳವೆರಡಂ ಕಳಚಿ
ಬೇಕು ಬೇಡೆಂಬ ಜನವರ್ಗದಲಿ ಹಂಚಿ
ತನುವೆಂಬ ಘೋರ ಕಾರಾಗೃಹದ ಗವಿಯಿಂದೆ
ಜಿಡಿಸಿ ಹೊರಗಾಗಿಸುವೆಯೆಂದು ವಿಭುವೇ?—ನೀಯೆನ್ನ || ೮೩ ||

ಹೃದಯದಲಿ ನೆಲೆಗೊಂಡ ನಿನ್ನೊಳೊಂದಾಗುತ್ತ
ಬ್ರಹ್ಮನಾಡಿಯ ಹಾದಿಹಿಡಿದು ಹೊರವಡುತ
ದಿನಕರನು ಕೈಗೊಡಲು ಮುಂದೆ ನಡೆವೊಲು ಮಾಡಿ
ಪ್ರಿಯಸುತನನೆಂತಂತು ಕಂಡೆಂದು ಸುಖಿಪ್ಪೆ?—ಎನ್ನ ನೀಂ || ೮೪ ||

ಅಗ್ನಿ ಮೊದಲಿಗನೆನಲು ಅಮಾನವನೆ ಕಡೆಯಾಗಿ
ಆತಿವಾಹಿಕರೆನಿಪ ನಿನ್ನ ಪೂರುಷರು
ದಟ್ಟಗತ್ತಲೆ ತುಂಬಿದೀ ತ್ರಿಗುಣದಡವಿಯಿಂ
ಎಂದು ದಾಟಿಪರೈಯ ಎನ್ನನಚ್ಯುತನೇ? || ೮೫ ||

ಎಂದು ದಾಟಿಸುತೆ ವಿರಜಾನದಿಯನೊಲವಿಂದೆ
ಪರಿಶುದ್ಧ ಸತ್ತ್ವಮಯವೂ ಸೌಮ್ಯವೆನಿಪ
ತನುವ ಕರುಣಿಸಿ ಬ್ರಹ್ಮರೂಪದಿಂ ಸಿಂಗರಿಸಿ
ಕಿಂಕರನನಾಗಿಸುವೆ ಯೆನ್ನ ವಿಭುವೇ || ೮೬ ||

ಸಂಸಾರಸಾಗರದಿನುದ್ಧರಿಸಿ ಹೊಳಪಿತ್ತು
ಕೌಸ್ತುಭದ ರನ್ನಗನ್ನಡಿಯನೆಂತಂತು
ಎಂದು ನಿನ್ನೆದೆಗೆ ಜೋಡಿಸುವೆಯೆನ್ನಂ ದೇವ!
ನೋಡಿ ನಲಿಯುಲು ದೇವಿ ಚೆಲುವನೊಲಿದು? || ೮೭ ||

ಕದಾ ತವ ಪಾದಪದ್ಮೇ
ಭವಿಷ್ಯಾಮಿ ನತಸತ್ಯ, ಕೇಳಿಕ್ರಾಂತತ್ರಿಭುವನೇ
ಮದನರಿಪುಮಕುಟಮಂಡನ
ಸುರಸರಿತ್ಸ್ರೋತಃ ಸೂಚಿತ ಮಧುಪ್ರವಾಹೇ || ೮೮ ||

ಉಪನಿಷಚ್ಛಿರಃಕುಸುಮಂ
ಉತ್ತಂಸ್ಯ ತವ ಪದಾಂಬುಜಯುಗಳಮ್
ದಯಿತೋ ಭವಿಷ್ಯಾಮಿ ಕದಾ
ದಾಸೋ ದಾಸಾನಾಂಸತ್ಯ, ಸೂರಿಸದೃಕ್ಷಃ || ೮೯ ||

ಅಪುನರ್ನಿವೃತ್ತಿಯೋಗ್ಯಂ
ಅವತಾರವಿಹಾರಸಹಚರತ್ವಧನ್ಯಮ್
ಆತ್ಮಸಮಭೋಗಮಾತ್ರಂ
ಅನುಭವಿಷ್ಯಸಿ ದೇವನಾಥ ಕದಾನು ಮಾಮ್ || ೯೦ ||

ಇತಿ ಸ್ಫುಟಮನೋರಥಂ ಮಾಂ
ಏತಾದೃಶವಚನಸಾರಂ ವಶಗಮ್
ಕುರುಷ್ವ ನಿಜಗುಣಗಣೈಃ
ಸತ್ಯಂ ದಾಸಾನಾಂಸತ್ಯ, ಸದಾ ಸ್ವಚ್ಛನ್ದಃ || ೯೧ ||

ಬಾಲಪ್ಲವಗ ಇವ ತರಳೋ
ಮಾರುತಿಜಾತಿರಿತಿ ಸಾಗರಂ ತರಿತುಮನಾಃ
ಪ್ರಾರ್ಥಯೇ ತ್ವಾಮಚ್ಯುತ
ಕಾಂಕ್ಷಿತಪದಪದ್ಮ ಕ್ಷಮಸ್ವ ಮಮ ಕಾಪೇಯಮ್ || ೯೨ ||

ಅಚ್ಯುತ ವಿಷಯಾಕ್ರಾಂತಂ
ಭವಾರ್ಣವಾವರ್ತಭ್ರಮಿ ನಿಮಜ್ಜಂತಮ್
ಜನನೀಸ್ತನಂಧಯಮಿವ ಮಾಂ
ಉದ್ಧೃತ್ಯ ಸೇವಸ್ವ ಸ್ವಯಂ ಪಥ್ಯಮ್ || ೯೩ ||

ಮನ್ಮಥಾರಿಯ ಮುಡಿಯ ಸಿಂಗರಿಪ ಸುರನದಿಯೆ
ಮಕರಂದದೊಸರೆನಲು ಮಹಿಮೆಯಂ ಮೆರೆದು
ಲೀಲಾವಿಹಾರದಿಂ ಮೂರುಲೋಕವನಳೆದ
ನಿನ್ನಡಿಯ ತಾವರೆಯೊಳೆಂದು ಸಲುವೆ?—ನಾಂ ಪ್ರಭುವೆ || ೮೮ ||

ಉಪನಿಷತ್ತುಗಳ ತಲೆದೊಡವಾಗಿ ಹೆಸರಾದ
ನಿನ್ನಡಿಯ ತಾವರೆಯ ಮುಡಿಗೆ ಜೋಡಿಸುತ
ಸೂರಿಗಳು ಸೈಯೆನಲು ನಿನಗೆ ನಾನೆಂದೈಯ
ಪ್ರೀತಿಪಾತ್ರನೆನಿಪ್ಪ ದಾಸನೆನಿಸುವುದು ? || ೮೯ ||

ಅವತಾರಲೀಲೆಯೊಳಗೊಡನಾಡಿಯುಹ ಭಾಗ್ಯ
ವೊದಗಿ ಪುನರಾವೃತ್ತಿರಹಿತನೆಂದೆನಲು
ನಿನ್ನ ಸುಖದಂತೆಯೇ ಎನ್ನ ಸುಖವೂ ಎನಿಸಿ
ಅನುಭವಿಪೆಯೆಂದು ನೀನೆನ್ನ ವಿಭುವೇ ? || ೯೦ ||

ಇಂತು ಹೊರಹೊಮ್ಮಿರ್ದ ಬಯಕೆಯಿಂದಂ ಕೂಡಿ
ಈ ಬಗೆಯ ನುಡಿಯಿನಿತೆ ಹುರುಳಾಗಿ ಸಂದ
ಎನ್ನನೆಲೆ ದಾಸಸತ್ಯನೆ ! ಹೆಸರು ಸಾರ್ಥವೆನೆ
ಎಂದುಂ ಅಡಿಯಾಳೆನಿಸು ನೀಂ ಸ್ವತಂತ್ರಂ || ೯೧ ||

ಮಾರುತಿಯ ಜಾತಿ ನಾನೆಂದು ಹುಲುಕಪಿಯೊಂದು
ಕಡಲ ದಾಟಲು ಬಯಸಿ ಮಿಡುಕಿ ತುಡಿವಂತೆ
ಶರಣರೆಲ್ಲಾಸೆಪಡುವಡಿದಾವರೆಯ ನಿನ್ನ
ಬೇಡುವೆಂ ! ಕ್ಷಮಿಸೈಯ ಕಾಪೇಯವಿದನು || ೯೨ ||

ಇಂದ್ರಿಯಂಗಳ ಸುಳಿಗೆ ಸಿಲುಕಿ ಭವಸಾಗರದೆ
ಪಾತಳಕೆ ಮುಳುಗುತಿರುವೆನಗೆ ಕೈಗೊಟ್ಟು
ತಾಯಿ ಕೂಸಿಂಗಾಗಿ ಪಥ್ಯವನು ಸೇವಿಸುತ
ನಡೆದು ಕಾಪಿಡುವಂತೆ ರಕ್ಷಿಸಚ್ಯುತನೇ || ೯೩ ||

ಕರ್ಮಮಯಘರ್ಮತಪ್ತಂ
ಸುಖಮೃಗತೃಷ್ಣಾಭಿಃ ಕಾಭಿರಪ್ಯತೃಷ್ಣಕಮ್
ಕಾರಯ ನಿರ್ವೃತಂ ಮಾಂ
ಕರಕಾಶಿಶಿರೈಃ—ಅಚ್ಯುತ, ಕಟಾಕ್ಷೈಃ ॥ ೯೪ ॥

ತವಚಿಂತನವಿಮುಖಾನಾಂ
ದೃಷ್ಟಿವಿಷಾಣಾಮಿವ ದರ್ಶನಾನ್ಮೋಚಯನ್
ಅಮೃತಮುಖಾನಾಮಿವ ಮಾಂ
ಅಚ್ಯುತ ಭಕ್ತಾನಾಂ ನಯಸ್ವ ನಯನಾಸಾರಮ್ ॥ ೯೫ ॥

ವಿಷಮಿಳಿತಮಧುನಿಭೇಷು ಚ
ತೃಣಪ್ರತಿಮೇಷು ಚ ಪ್ರತಿಗ್ರಹೇಷು ಪ್ರಲುಠಿತಮ್
ಅಮೃತನಿಧಾವಿವಾಚ್ಯುತ,
ಸ್ಥಾಪಯ ತ್ವಯಿ ನಿರ್ಮಮಂ ಮಮ ಹೃದಯಮ್ ॥ ೯೬ ॥

ನಿತ್ಯಮಸ್ಮಿನ್ ಕೃಪಣೇ
ನಿಕ್ಷಿಪ ನಮತ್ಸತ್ಯ, ನಿಧಿಸದೃಕ್ಷೌ
ಪ್ರವಹನ್ನಖಪ್ರಭಾಝುರ
ಪ್ರಶಮಿತ ಪ್ರಣಮತ್ಸಂಜ್ವರೌ ತವಚರಣೌ ॥ ೯೭ ॥

ಶರಣಾಗತ ಇತಿ ಜನಿತೇ
ಜನವಾದೇಽಪಿ ಯದ್ಯಚ್ಯುತ ನ ರಕ್ಷಸಿ ಮಾಮ್
ಭವೇತ್ಖಲು ಸಾಗರಘೋಷಃ
ಸಾಗರಪುಳಿನೇ ತಾದೃಶಂ ತವವಚನಮ್ ॥ ೯೮ ॥

ನಿಕ್ಷಿಪ್ತೋಽಸ್ಮಿ ಚಾಗತಿಃ
ನಿಪುಣೈಸ್ತ್ವಯಿ ನಾಥ ಕಾರುಣಿಕೈಃ
ತಾಂಸ್ತವ ದೃಷ್ಟ್ವಾ ಪ್ರಿಯಾನ್
ಭೃತಂ ನತಸತ್ಯ, ಭರಸ್ವಾತ್ಮನೋ ಭರಮ್ ॥ ೯೯ ॥

ಕರ್ಮಗಳ ಬೇಸಗೆಯ ಬೇಗೆಯಿಂ ಬಸವಳಿದ-
ಸುಖದ ಮೃಗತೃಷ್ಣಿಕೆಯಿನಿಂಗದಿಹ ತೃಷೆಯು
ಎನ್ನನಚ್ಯುತ! ಆಲಿಕಲ್ಲಿನಂತಿರೆ ಕುಳಿರ್ವ
ನೋಟಂಗಳಂ ಕರೆದು ತಣ್ಪಿಸೈಯ || ೯೪ ||

ನಿನ್ನ ಚಿಂತನೆಯುಳಿದು ದೃಷ್ಟಿವಿಷಸರ್ಪಂಗ
ಳಂತೆ ಘೋರರೆನಿಪ್ಪ ಜನರ ನೋಟಕ್ಕೆ
ಸಿಲುಕಿಸದೆ ಅಮೃತಮುಖರಾದ ನಿನ್ನಯ ಭಕ್ತ
ರನಘವೃಷ್ಟಿಗೆ ಗುರಿಯನಾಗಿಸೈಯೆನ್ನ || ೯೫ ||

ತೃಣದಂತೆ ಲಘುವಾಗಿ ವಿಷಮಿಶ್ರ ಮಧುವಂತೆ
ಕೇಡಿಗಾಗರವಾದ ಕೊಳ್ಳಿಯೊಳು ಹೊರಳಿ
ಗಾಸಿವಡುವೀಯೆನ್ನ ಮಾನಗೇಡಿನ ಮನವಂ
ಅಮೃತನಿಧಿಯಾದ ನಿನ್ನಲ್ಲಿ ನೆಲೆಗೊಳಿಸೈ—ಓ ಅಚ್ಯುತನೆ || ೯೬ ||

ಉಗುರ ಹೊಗರಿನ ಹರಿವ ಝರಿಯಿಂದೆ ನಮಿಸಿದರ
ಜ್ವರವ ಶಮಿಸುವ ನಿನ್ನ ಚರಣಯುಗವೆಂಬ
ನಿಧಿಯನೀ ಬರಗೆಟ್ಟ ಕೃಪಣನೆದೆಯಾಳದಲಿ
ಹುದುಗಿಸುತೆ ನಿತ್ಯವೂ ಸಲಿಯಿಸೈ ವಿಭುವೈ || ೯೭ ||

ಶರಣಾಗತಂ ನಾನೆಸುತ್ತೆ ಜನತತಿ ತಿಳಿದು
ಕೂಗುತಿರೆ—ನೀನೆನ್ನ ಕಾಪಾಡದಿರಲು
ಕಡಲದಂಡೆಯ ಮಳಲಮೇಲೆ ನೀಂ ನುಡಿದ ನುಡಿ
ಕಡಲ ಮೊರೆತದ ಪೋಲೆ ವ್ಯರ್ಥವೆಂದೆನಸರೇ ?—ಪ್ರಭುವೆ || ೯೮ ||

ನಿರ್ಗತಿಕನಾದೆನಗೆ ನೀನೆ ಗತಿ ಸರಿಯೆಂದು
ಕಾರುಣಿಕ ನಿಪುಣರ್ಕಳರ್ಪಿಸಿದರರಿತು
ನಿನಗೆ ಪ್ರಿಯರೆಂದೆನಿಸಿದವರ ನೋಡುತೆ—ಹೊತ್ತ
ಹೊರೆಯಲ್ಲದನ್ಯವಲ್ಲೆಂದು ಭರಿಸೆನ್ನಂ—ಓ ವಿಭುವೆ ನತಸತ್ಯ ! || ೯೯ ||

ನತಸತ್ಯ-ಪಕ್ಕಣಾನೀತ
ಗಳಿತಕಿರಾತಭ್ರಮನಿಜಕುಮಾರಮಿವ ನೃಪಃ
ಭವಿಷ್ಯದ್ಯೌವನ ವಧೂಂ
ವರ ಇವ ಮಾಂ ಲಭಸ್ವ ಮಂತ್ರಿಜನ ವಿಜ್ಞಾಪಿತಂ || ೧೦೦ ||

ಇತಿಕವಿತಾರ್ಕಿಕಕೇಸರಿ
ವೇದಾಂತಾಚಾರ್ಯವೇಂಕಟೇಶವಿರಚಿತಮ್
ಸುಭಗಮಚ್ಯುತಶತಕಂ
ಸಹೃದಯ ಹೃದಯೇಷು ಶೋಭತಾಂ ಸಮಗ್ರಗುಣಮ್ || ೧೦೧ ||

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ
ಶ್ರೀಮತೇ ವೇಂಕಟೇಶಾಯ ವೇದಾಂತ ಗುರವೇ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ

ಶ್ರೀಃ

ಎಂದೊ ಬೇಡರಪಡೆಗೆ ಸಿಲುಕಿ ಅವರೊಡನಾಡಿ
—ತನ್ನನೇ ಮರೆತಿದ್ದ ರಾಜ ಪುತ್ರನನು
ಮಂತ್ರಿ ತಂದೊಪ್ಪಿಸಲು ಹಿಗ್ಗಿ ನಲಿದಾಡುತ್ತ
—ತಂದೆ ಕೈಕೊಂಡವನ ತನಗೊಪ್ಪುವಂತೆ
ಸರ್ವಸಂಸ್ಕಾರದಿಂ ಹದುಳಗೊಳಿಸುವ ಪೋಲ್
—ಗುರುಗಳೊಪ್ಪಿಸಿದೆನ್ನ ನೀನು ಕೈಕೊಂಡು
ವಿಷಯವನಗಳ ಬಳಕೆ ಮರೆಯೆ ನಿನ್ನಾಸ್ಥಾನ
—ಸಂಚರಣ ಯೋಗ್ಯತೆಯ ಕಲಿಸಿ ನಲಿಸೈ
ಕಿರಿಯ ಹರೆಯದ ಕನ್ನೆಗೊದಗಲಿಹ ಜವ್ವನನ
ತಿಳಿದು ವರಿಸುವ ವರನ ತೆರದೆ ನಲಿಸೈ ॥ ೧೦೦ ॥

ಇಂತುಕವಿತಾರ್ಕಿಕರ ನಡುವೆ ಕೇಸರಿಯಾಗಿ
ವೇದಾಂತ ಗುರುವೆನಿಪ ವೆಂಕಟೇಶ್ವರನು
ರಚಿಸಿದಚ್ಯುತಶತಕವಿದು ಸಮಗ್ರಗುಣಂ
ಸಹೃದಯರ ಹೃದಯಕ್ಕೆ ಸೊಗಸುವಾಭರಣಂ ॥ ೧೦೧ ॥

ದೇಸಿಗರ ದೇಸಿಗನ ದೇಸಿಯೀ ನುಡಿಗಟ್ಟಿ
ನಾಸರೆಯುಲಚ್ಚುತನ ಚರಣವನು ಮುಟ್ಟಿ
ನುಡಿಯುಲಾಗದ ಹಲವು ಬೇಸರದ ತಲೆಮೆಟ್ಟಿ
ಹಲರು ಸುಖಿಸಲೆನುತ್ತೆ ಬಯುಸುವುದು ದಿಟ್ಟಿ
**ಸುಖಿಸಲೆಂದಾಶಿಸುವೆನಿಂತು ಕೈಕಟ್ಟಿ**

---

॥ ಶ್ರೀಃ ॥

# ಶ್ರೀ ವೇಂಕಟನಾಥರ ದಶಾವತಾರಸ್ತುತಿ



ದೇವೋ ನಃ ಶುಭಮಾತನೋತು ದಶಧಾ ನಿರ್ವರ್ತಯನ್ ಭೂಮಿಕಾಂ
ರಂಗೇ ಧಾಮನಿ ಲಬ್ಧನಿರ್ಭರರಸೈಃ ಅಧ್ಯಕ್ಷಿತೋ ಭಾವುಕೈಃ
ಯದ್ಭಾವೇಷು ಪೃಥಗ್ವಿಧೇಷ್ವನುಗುಣಾನ್ ಭಾವಾನ್ ಸ್ವಯಂ ಬಿಭ್ರತೀ
ಯದ್ಧರ್ಮೈರಿಹ ಧರ್ಮಿಣೀ ವಿಜಯತೇ ನಾನಾಕೃತಿರ್ನಾಯಿಕಾ ॥ ೧ ॥

ನಿರ್ಮಗ್ನ ಶ್ರುತಿಜಾಲಮಾರ್ಗಣದಶಾದತ್ತಕ್ಷಣೈರೀಕ್ಷಣೈಃ
ಅಂತಸ್ತನ್ವದಿವಾರವಿಂದಗಹನಾನ್ಯೌದನ್ವತೀನಾಮಪಾಂ
ನಿಷ್ಪ್ರತ್ಯೂಹತರಂಗರಿಙ್ಗಣಮಿಥಃಪ್ರತ್ಯೂಢಪಾಥಶ್ಛಟಾ
ದೋಳಾರೋಹಣದೋಹಳಂ ಭಗವತೋ ಮಾತ್ಸ್ಯಂ ವಪುಃ
ಪಾತು ನಃ ॥ ೨ ॥

॥ ಶ್ರೀಃ ॥

# ಶ್ರೀ ವೇಂಕಟನಾಥರ ದಶಾವತಾರ ಸ್ತೋತ್ರ

(ಅನುವಾದ)

---

ಸಹಜವಿದು ಸಹಧರ್ಮಿಣೀತ್ವಕೆನೆ ಬಲ್ಲವರು
ಬೇರೆಬೇರೆಯು ತನ್ನ ವಿವಿಧ ವೇಷದಲಿ
ಅನುರೂಪರೂಪಗಳ ಧರಿಸುತ್ತೆ ಸಿರಿದೇವಿ
ನಾಯಿಕಾಭಾವದಿಂ ವಿಹರಿಸುತಿರೆ
ಹತ್ತುಬಗೆ ವೇಷಗಳ ಕೈಕೊಂಡು ರಂಗದಲಿ
ಮೈದೋರಿ ಭಾವುಕರ ಕಣ್ಮನವ ಸಲಿಸಿ
ಪರರಸದೆ ಮುಳುಗಿಸುವ ಲೀಲಾವಿಹಾರಿ ಹರಿ
ಕೊಡಲೆಮಗೆ ಮಂಗಳವನು ॥ ೧ ॥

ಮುಳುಗಿ ಮರೆಯಾಗಿದ್ದ ಶ್ರುತಿತತಿಯನರಸುತ್ತ
ಹುಡುಕುನೋಟವ ಚೆಲ್ಲಿ ಸುತ್ತಮುತ್ತ
ಕಡಲ ನೀರೊಳಗುಂಟು ತಾವರೆಯ ವನವೆಂಬ
ಭಾವವೊಂದನು ಮನಕೆ ಮೂಡಿಸುತ್ತ
ತಡೆಯಿಲ್ಲದಿದಿರೆದ್ದು ಮೊರೆಮೊರೆದು ರಿಂಗಣಿಂ
ಗುಣಿವ ತೆರೆಯೋಳಿಗಳ ಜಲರಾಶಿಯಾ
ಸೊಗಸುದೊಟ್ಟಿಲನೇರಿ ವಿಹರಿಸಲು ಬಯಸಿದಾ
ಪ್ರಭುವ ಮತ್ಸ್ಯಾಕೃತಿಯು ಪೊರೆಯಲೆಮ್ಮಂ ॥ ೨ ॥

ಅವ್ಯಾಸುರ್ಭುವನತ್ರಯೀಮನಿಭೃತಂ ಕಂಡೂಯನೈರದ್ರಿಣಾ
ನಿದ್ರಾಣಸ್ಯ ಪರಸ್ಯ ಕೂರ್ಮವಪುಷೋ ನಿಶ್ವಾಸವಾತೋರ್ಮಯಃ
ಯದ್ವಿಕ್ಷೇಪಣ ಸಂಸ್ಕೃತೋದಧಿಪಯಃಪ್ರೇಂಖೋಳ ಪರ್ಯಂಕಿಕಾ
ನಿತ್ಯಾರೋಹಣನಿರ್ವೃತೋ ವಿಹರತೇ ದೇವಃ ಸಹೈವ ಶ್ರಿಯಾ ॥ ೩ ॥

ಗೋಪಾಯೇದನಿಶಂ ಜಗಂತಿ ಕುಹನಾಪೋತ್ರೀ ಪವಿತ್ರೀಕೃತ
ಬ್ರಹ್ಮಾಂಡಪ್ರಳಯೋರ್ಮಿ ಘೋಷ ಗುರುಭಿಃ ಘೋಣಾರವೈಃ ಘುರ್ಘುರೈಃ
ಯದ್ದಂಷ್ಟ್ರಾಂಕುರಕೋಟಿಗಾಢಘಟನಾ ನಿಷ್ಕಂಪನಿತ್ಯಸ್ಥಿತಿಃ
ಬ್ರಹ್ಮಸ್ತಂಬಮಸೌದಸೌ ಭಗವತೀ ಮುಸ್ತೇವ ವಿಶ್ವಂಭರಾ ॥ ೪ ॥

ಪ್ರತ್ಯಾದಿಷ್ಟಪುರಾತನಪ್ರಹರಣಗ್ರಾಮಃ ಕ್ಷಣಂ ಪಾಣಿಜೈಃ
ಅವ್ಯಾತ್ತ್ರೀಣಿ ಜಗಂತ್ಯಕುಂಠಮಹಿಮಾ ವೈಕುಂಠ ಕಂಠೀರವಃ
ಯತ್ಪ್ರಾದುರ್ಭವನಾದವಂಧ್ಯಜಠರಾ ಯಾದೃಚ್ಛಿಕಾದ್ವೇಧಸಾಂ
ಯಾ ಕಾಚಿತ್ಸಹಸಾ ಮಹಾಸುರಗೃಹಸ್ಥೂಣಾ ಪಿತಾಮಹ್ಯಭೂತ್ ॥ ೫ ॥

ಕಡಲ ನಡುವಣ ತೆರೆಯ ತೂಗುಮಂಚವನೇರಿ
ಸಿರಿಯೊಡನೆ ನಿತ್ಯವೂ ಸುಖಿಸೆ ಜಯಸಿ
ವಿವಿಧ ವಸ್ತುವ ಸುರಿದು ಜಲನಿಧಿಯ ಸಂಸ್ಕರಿಸಿ
ಕಡೆಯೆ ದೇವಾಸುರರ ಮಿಗೆ ಪ್ರೇರಿಸಿ
ಮಂದರವ ಕಡೆಗೋಲು ಚೆನ್ನ ತುರಿಸುತ್ತಿರಲು
ನವೆ ನೀಗಿ ಸೊಗವಾಗಿ ತೂಂಕಡಿಸಿದಾ
ಪರಮನಾ ಕೂರ್ಮರೂಪದ ತನುವಿನುಸಿರಿಂದಲ್—ಎದ್ದ ತೆರೆ
ಕಾಪಿಡಲಿ ಮೂಜಗವನು || ೩ ||

ಕೋರೆದಾಡೆಯ ಮೊನೆಯ ತುದಿಯಿಂದ ಸಂಘಟಿಸಿ
ದೃಢವಾಗಿ ನೆಲೆಗೊಳಿಸಿ ವಿಶ್ವಧರೆಯ
ಮುಷ್ಟಿಯಂ ಹಡೆವಂತೆ ಬ್ರಹ್ಮಮಂ ಸ್ತಂಬಮಂ
ಪಡೆಯಿಸಿದ ಸೋಜಿಗದ ಪರಮನಾಗಿ
ಪ್ರಳಯ ಜಲಧಿಯ ತೆರೆಯ ಮೊರೆತವನೆ ಮೀರಿದಾ
ಘುರುಘುರುಧ್ವನಿಯಿಂದೆ ಜಗವನೆಲ್ಲಾ
ಪಾವನಂಗೊಳಿಸಿದ್ದ ಮಾಯಾವರಾಹತನು
ಜಗವನೆಂದುಂ ಪೊರೆಯಲಿ || ೪ ||

ಬಳಬಳಸಿ ಬೇಸರಂಗೊಂಡಂತೆ ತೊರೆದೆಲ್ಲ
ಬಲ್ಲ ದಿವ್ಯಾಯುಧಂಗಳ ತತಿಯನು
ಕೈಯುಗುರೆ ಸಾಕಾವ ಕೃತಿಗವಿಘಾತಂಗೊಂದು
ಕೊರೆಯಿಲ್ಲವೆಂಬುದಂ ಲೋಕವರಿಯೆ
ಅಸುರನರಮನೆಯೊಂದು ಕಂಬಮುಂ ಬಂಜೆ ನಾ
ನಲ್ಲ ಬ್ರಹ್ಮಂಗಜ್ಜಿಯೆಂದು ನಲಿಯೆ
ಅವತರಿಸಿ ಗರ್ಭದಲಿ ತೋರಿದಾ ವೈಕುಂಠ
ಸಿಂಹನೋವಲಿ ತ್ರಿಜಗವಂ || ೫ ||

ವ್ರೀಡಾವಿದ್ಧವದಾನ್ಯದಾನವಯಶೋ ನಾಸೀರಧಾಟೀಭಟಃ
ತ್ರಯ್ಯಕ್ಷಂ ಮಕುಟಂ ಪುನನ್ನವತು ನಃ ತ್ರೈವಿಕ್ರಮೋ ವಿಕ್ರಮಃ
ಯತ್ಪ್ರಸ್ತಾವಸಮುಚ್ಛ್ರಿತ ಧ್ವಜಪಟೀ ವೃತ್ತಾಂತ ಸಿದ್ಧಾಂತಿಭಿಃ
ಸ್ರೋತೋಭಿಃ ಸುರಸಿಂಧುರಷ್ಟಸು ದಿಶಾಸೌಧೇಷು ದೋಧೂಯತೇ ॥ ೬ ॥

ಕ್ರೋಧಾಗ್ನಿಂ ಜಮದಗ್ನಿ ಪೀಡನಭವಂ ಸಂತರ್ಪಯಿಷ್ಯನ್ ಕ್ರಮಾತ್
ಅಕ್ಷತ್ರಾಮಿಹ ಸಂತತಕ್ಷಯ ಇಮಾಂ ತ್ರಿಸ್ಸಪ್ತಕೃತ್ವಃ ಕ್ಷಿತಿಂ
ದತ್ವಾ ಕರ್ಮಣಿ ದಕ್ಷಿಣಾಂ ಕ್ವಚನ ತಾಮಸ್ಕಂಧ್ಯ ಸಿಂಧುಂ ವಸನ್
ಅಬ್ರಹ್ಮಣ್ಯಮಪಾಕರೋತು ಭಗವಾನಾಬ್ರಹ್ಮಕೀಟಂ ಮುನಿಃ ॥ ೭ ॥

ಪಾರಾವಾರಪಯೋ ವಿಶೋಷಣಕಲಾಪಾರೀಣ ಕಾಲಾನಲ
ಜ್ವಾಲಾಜಾಲ ವಿಹಾರಹಾರಿ ವಿಶಿಖವ್ಯಾಪಾರ ಘೋರಕ್ರಮಃ
ಸರ್ವಾವಸ್ಥ ಸಕೃತ್ಪ್ರಪನ್ನಜನತಾ ಸಂರಕ್ಷಣೈಕವ್ರತೀ
ಧರ್ಮೋ ವಿಗ್ರಹವಾನ್ ಅಧರ್ಮವಿರತಿಂ ಧನ್ವೀ ಸ ತನ್ವೀತು ನಃ ॥ ೮ ॥

ಮುಕ್ಕಣ್ಣನುರುಮುಡಿಯ ತೊಳೆದು ಪಾವನಗೊಳಿಸೆ
ಸಂಕಲ್ಪಗೊಂಡಂತೆ ವಿಕ್ರಮಿಸುತ
ಕೊಡುಗೈಯ ಕಲಿ ಬಲಿಯ ಕೀರ್ತಿಯಂ ಜಗಕೆಲ್ಲ
ಸಾರುವೂಳಿಗದಣಿಯ ಪ್ರಥಮ ಭಟನಾಗಿ
ಎತ್ತಿದಾ ಬಾವುಟದ ಪಟದ ಹರಿವಿನವೋಲು
ಚರಣದುಂಗುಟದಲ್ಲಿ ಬಳೆದ ಗಂಗೆ
ದಿಗ್ದಿಗಂತದ ಸೌಧಮಂಡಲದ ಬಳಿ ಮಿಳಿರೆ
ಹರಿಯಿಸಿದ ತ್ರಿಕ್ರಮಂ ಪೊರೆಯಲೆಮ್ಮಂ ॥ ೬ ॥

ಜಮದಗ್ನಿ ಹಿಂಸೆಯಿಂದೊಗೆದ ರೋಷಾಗ್ನಿಯಂ
ತರ್ಪಿಸಲು ಮೂರೇಳುಬಾರಿ ಧರೆಯಂ
ಬಳಸಿ ದುಷ್ಟಕ್ಷತ್ರಕುಲವನಿಲ್ಲೆಂದೆನಿಸಿ
ಯಜ್ಞ ದಕ್ಷಿಣೆಯಾಗಿ ನೆಲವನಿತ್ತು
ಕಡಲನೊಕ್ಕಡೆ ದೂಡಿ ಕಡೆಗೊಂದುಕಡೆ ನೆಲಸಿ
ಹಿರಿಯನೆನಿಸಿದ ಭುವನಭರಣನಿಪುಣಂ
ಬ್ರಹ್ಮಕುಲ ಪೀಡೆಯಂ ಪರಿಹರಿಸಿ ಪಾಲಿಸಲಿ
ಬ್ರಹ್ಮಕೀಟಂಬರೆಗಮೊಲ್ದ ಮುನಿಪಂ ॥ ೭ ॥

ಪ್ರಳಯದಗ್ನಿಯ ಹೊಮ್ಮಿದುರಿಯ ರಾಶಿಯ ರಭಸ
ವಿನಿತಿಲ್ಲವೆಂದೆನಲು ಕಡುಹ ಕೈಕೊಂಡು
ಕಡಲ ನೀರೆಲ್ಲವಂ ಬತ್ತಿಸುವ ಕಲೆಯಲ್ಲಿ
ಪರಿಣತಿಯ ತೋರಿಸಿದ ಘನಬಾಣಮಹಿಮಂ
ಒಮ್ಮೆ ಶರಣೆಂದವರದಾರಿರಲಿ ಯೆಂತಿರಲಿ
ರಕ್ಷಿಸುವ ವ್ರತವೊಂದೆ ದೀಕ್ಷೆ ತನಗಾದ
ಧರ್ಮವೇ ಮೈವೆತ್ತ ಬಿಲ್ಗಾರನೆಮಗೆ
ಅಧರ್ಮದ ಗಸಣಿಯಿಲ್ಲೆನಿಸಲಿ ॥ ೮ ॥

ಫಕ್ಕತ್ಕೌರವಪತ್ತನ ಪ್ರಭೃತಯಃ ಪ್ರಾಸ್ತಪ್ರಲಂಬಾದಯಃ
ತಾಲಾಂಕಸ್ಯ ತಥಾವಿಧಾ ವಿಹೃತಯಃ ತನ್ವಂತು ಭದ್ರಾಣಿ ನಃ
ಕ್ಷೀರಂ ಶರ್ಕರಯೇವ ಯಾಭಿರಪೃಥಗ್ಭೂತಾಃ ಪ್ರಭೂತೈರ್ಗುಣೈಃ
ಆಕೌಮಾರಕಮಸ್ವದಂತ ಜಗತೇ ಕೃಷ್ಣಸ್ಯ ತಾಃ ಕೇಳಯಃ ॥ ೯ ॥

ನಾಥಾಯೈವ ನಮಃಪದಂ ಭವತು ನಃ ಚಿತ್ರೈಶ್ಚರಿತ್ರಕ್ರಮೈಃ
ಭೂಯೋಭಿಃ ಭುವನಾನ್ಯಮೂನಿ ಕುಹನಾಗೋಪಾಯ ಗೋಪಾಯತೇ
ಕಾಳಿಂದೀರಸಿಕಾಯ ಕಾಳಿಯಫಣಿಸ್ಫಾರಸ್ಫಟಾವಾಟಿಕಾ
ರಂಗೋತ್ಸಂಗತರಂಗ ಚಂಕ್ರಮಧುರಾ ಪರ್ಯಾಯ ಚರ್ಯಾಯತೇ ॥ ೧೦ ॥

ಭಾವಿನ್ಯಾ ದಶಯಾ ಭವನ್ನಿಹ ಭವಧ್ವಂಸಾಯ ನಃ ಕಲ್ಪತಾಂ
ಕಲ್ಕೀ ವಿಷ್ಣುಯಶಃಸುತಃ ಕಲಿಕಥಾಕಾಲುಷ್ಯಕೂಲಂಕಷಃ
ನಿಶ್ಶೇಷ ಕ್ಷತಕಂಟಕೇ ಕ್ಷಿತಿತಲೇ ಧಾರಾಜಲೌಘೈಃ ಧ್ರುವಂ
ಧರ್ಮ್ಯಂ ಕಾರ್ತಯುಗಂ ಪ್ರರೋಹಯತಿ ಯನ್ನಿಸ್ತ್ರಿಂಶ ಧಾರಾಧರಃ ॥ ೧೧ ॥

ಹಾಲೊಡನೆ ಸಕ್ಕರೆಯು ಬೆರೆತಂತೆ ಶ್ರೀಕೃಷ್ಣ
ಲೀಲೆಯೊಡನಿರೆ ತನ್ನ ಕೌಮಾರಕೇಳಿ
ಬೇರೆನಿಸಿ ತೋರದೆಯೆ ಸೊಗಸು ಹೆಚ್ಚಿರೆ ಜಗಕೆ
ಸಹಜವೆನಿಪಿಂಪು ತೋರಿ
ಕೌರವನ ನಗರಿಯನು ನದಿಗೆ ದೂಡುವ ಯತ್ನ
ವಾ ಪ್ರಲಂಬಾದ್ಯಸುರ ವಧನೆಂಬ ತೆರದಾ
ಸೋಜಿಗದ ಹಲಬಗೆಯ ಹಲಧರನ ಲೀಲೆಗಳು
ಕೊಡಲೆಮಗೆ ಮಂಗಳವನು ॥ ೯ ॥

ಕಾಳಿಯನ ಹೆಡೆಯೆಡೆಯ ರತ್ನಪ್ರಕಾಶಮಯ
ನೂತನದ ಚಿತ್ರಮಯ ರಂಗಗಳಲಿ
ನೂರುಬಗೆ ನೃತ್ಯವನು ತೋರಿ ರಸವಂ ಬೀರಿ
ಕಂಡವರ ಕಣ್ಮನವ ತಣಿಸಿ ನಲಿಸಿ
ಅದ್ಭುತದ ಚರಿತಕ್ರಮಂಗಳಿಂ ಮರಮರಳಿ
ಜಗದೆಡರನೊಡನೊಡನೆ ತೂರಿ ಪೊರೆದಾ
ಕಪಟಗೋಪಾಲಂಗೆ ಯಮುನಾವಿಹಾರ
ರಸಿಕಂಗೆಮ್ಮ ನತಿ ಮಿಾಸಲು ॥ ೧೦ ॥

ಬರಲಿರುವ ಕಾಲದಲಿ ವಿಷ್ಣುಯಶಸುತನಾಗಿ
ಕಲಿಕಥೆಯ ಕಲ್ಮಷದ ರಾಶಿಗಳನು
ಬುಡಮುಟ್ಟ ಕೊಚ್ಚಿಟ್ಟು ಮುಳ್ಳುಕಳೆಯಿಲ್ಲದೊಲು
ಭೂಮಿಯನು ಹದವರಿತು ಹಸನುಗೊಳಿಸಿ
ಕೃತಯುಗದ ಧರ್ಮವನು ಕ್ಷಿತಿಯಲ್ಲಿ ನಾಟುತ್ತ
ಖಡ್ಗಧಾರಾಜಲದೆ ಪೋಷಿಪಾತಂ
ಹುಟ್ಟು ಸಾವಿನ ನಮ್ಮ ವಿಲಗವನು ಹೋಗಾಡಿ
ಕಾಪಿಡಲಿ ಕೃಪೆಯಿಟ್ಟು ಕಲ್ಕಿರೂಪಂ ॥ ೧೧ ॥

ಇಚ್ಛಾಮೀನ, ವಿಹಾರಕಚ್ಛಪ, ಮಹಾಪೋತ್ರಿನ್, ಯದೃಚ್ಛಾಹರೇ
ರಕ್ಷಾವಾಮನ ರೋಷರಾಮ ಕರುಣಾ ಕಾಕುತ್ಸ್ಥ ಹೇಲಾಹಲಿನ್
ಕ್ರೀಡಾವಲ್ಲವ ಕಲ್ಕಿವಾಹನದಶಾಕಲ್ಕಿನ್ ಇತಿ ಪ್ರತ್ಯಹಂ
ಜಲ್ಪಂತಃ ಪುರುಷಾಃ ಪುನಂತಿ ಭುವನಂ ಪುಣ್ಯೌಘಪಣ್ಯಾಪಣಾಃ ‖ ೧೨ ‖

ವಿದ್ಯೋದನ್ವತಿ ವೆಂಕಟೇಶ್ವರಕವೌ ಜಾತಂ ಜಗನ್ಮಂಗಳಂ
ದೇವೇಶಸ್ಯ ದಶಾವತಾರವಿಷಯಂ ಸ್ತೋತ್ರಂ ವಿವಕ್ಷೇತ ಯಃ
ವಕ್ತ್ರೇ ತಸ್ಯ ಸರಸ್ವತೀ ಬಹುಮುಖೀ ಭಕ್ತಿಃ ಪರಾ ಮಾನಸೇ
ಸಿದ್ಧಿಃ ಕಾಪಿ ತನೌ ದಿಶಾಸು ದಶಸು ಖ್ಯಾತಿಃ ಶುಭಾ ಜೃಂಭತೇ ‖ ೧೩ ‖

---

ಇಚ್ಛೆಯಿಂ ಮೀನ ವಿಹರಣಶೀಲಕೂರ್ಮ
ಘನವಾರಾಹ ಹೇಗೊ ಸಿಂಹ
ರಕ್ಷಾ ವಿನೋದವಾಮನ ರೋಷರಾಮ
ಕರುಣಾಸೀಮ ಕಾಕುತ್ಸ್ಥನೇ
ಲೀಲಾವಿಹಾರಿ ಹಲಧಾರಿ ಕೇಳೀಶೀಲ
ಗೋಪಾಲ ಕಲ್ಕಿವಾಹಾ
ಎನುತೆ ದಿನ ನುಡಿವವರು ಜಗವ ಪಾವನಗೊಳಿಸಿ
ಪುಣ್ಯವಂ ಮಾರುತಿಹರು || ೧೨ ||

ವಿದ್ಯಾಸಮುದ್ರ ಕವಿ ವೆಂಕಟೇಶ್ವರನಿಂದೆ
ಲೋಕಮಂಗಳಕಾಗಿ ಮೂಡಿಬಂದ
ದೇವದೇವನ ಹತ್ತುಮವತಾರ ವಿಷಯದೀ
ಸ್ತೋತ್ರಮಂ ಹಾಡುವವರಾ
ಮುಖದಲ್ಲಿ ಬಹುಮುಖಿ ಸರಸ್ವತಿಯು ಮನದಲ್ಲಿ
ಪರಭಕ್ತಿ ತನುವಿನಲ್ಲಿ
ಪರಮಸಿದ್ಧಿಯು ಹತ್ತು ದೆಸೆಯಲ್ಲಿ ಶುಭಕೀರ್ತಿ
ಯುಜ್ಜ್ವಲಿಸಿ ರಾಜಿಸುವುವು || ೧೩ ||

---

ಶ್ರೀಃ

# ಶ್ರೀ ವೇಂಕಟನಾಥ ವಿರಚಿತ ಅಷ್ಟಭುಜಾಷ್ಟಕ

ಶ್ರೀಮಾನ್ ವೆಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ||
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ.

ಗಜೇಂದ್ರರಕ್ಷಾತ್ವರಿತಂ ಭವಂತಂ
ಗ್ರಾಹೈರಿವಾಹಂ ವಿಷಯೈರ್ವಿಕೃಷ್ಟಃ
ಅಪಾರ ವಿಜ್ಞಾನ ದಯಾನುಭಾವಂ
ಆಪ್ತಂ ಸತಾಂ—ಅಷ್ಟಭುಜಂ ಪ್ರಪದ್ಯೇ || ೧ ||

ತ್ವದೇಕ ಶೇಷೋಹಂ—ಅನಾತ್ಮತಂತ್ರಃ
ತ್ವತ್ಪಾದ ಲಿಪ್ಸಾಂ ದಿಶತಾ ತ್ವಯೈವ
ಅಸತ್ಸಮೋಪ್ಯಷ್ಟಭುಜಾಪದೇಶ
ಸತ್ತಾಮಿದಾನೀಂ—ಉಪಲಂಭಿತೋಸ್ಮಿ || ೨ ||

ಸ್ವರೂಪ ರೂಪಾಸ್ತ್ರ ವಿಭೂಷಣಾದ್ಯೈಃ
ಪರತ್ವ ಚಿಂತಾಂ ತ್ವಯಿ ದುರ್ನಿವಾರಾಂ
ಭೋಗೇ ಮೃದೂಪಕ್ರಮತಾಂ—ಅಭೀಪ್ಸನ್
ಶೀಲಾದಿಭಿರ್ವಾರಯಸೀವ ಪುಂಸಾಂ || ೩ ||

ಶಕ್ತಿಂ ಶರಣ್ಯಾಂತರಶಬ್ದಭಾಜಾಂ
ಸಾರಂಚ ಸಂತೋಲ್ಯ ಫಲಾಂತರಾಣಾಂ
ತ್ವದ್ವ್ಯಾಪ್ಯಹೇತೋಃ ತ್ವಯಿ ನಿರ್ವಿಶಂಕಂ
ನ್ಯಸ್ತಾತ್ಮನಾಂ ನಾಥ ಬಿಭರ್ಷಿ ಭಾರಂ || ೪ ||

ಅಭೀತಿ ಹೇತೋಃ—ಅನುವರ್ತನೀಯಂ
ನಾಥ ತ್ವದನ್ಯಂ ನ ವಿಭಾವಯಾಮಿ
ಭಯಂ ಕುತಃ ಸ್ಯಾತ್ ತ್ವಯಿ ಸಾನುಕಂಪೇ
ರಕ್ಷಾ ಕುತಃ ಸ್ಯಾತ್ ತ್ವಯಿ ಜಾತರೋಷೇ || ೫ ||

ಶ್ರೀಃ

# ಶ್ರೀ ವೇಂಕಟನಾಥರ ಅಷ್ಟಭುಜಾಷ್ಟಕ

(ಅನುವಾದ)

---

ಕರಿರಾಜನ ರಕ್ಷಿಸುವಾತುರದಿಂ—ಜಗವೇ ಬೆರಗಾಗಲು ಸಡಗರಿಸಿ
ಕೊನೆಯಿಲ್ಲದ ವಿಜ್ಞಾನದ ಕರುಣೆಯ ಹಿರಿಮೆಯ ತೋರಿದ ಮಹಾನುಭಾವಾ
ಮೊಸಳೆಗಳೇ ಹಿಡಿದಂತಾಗಿರಲಿದೊ—ವಿಷಯಂಗಳ ಹಿಡಿತಕೆ ಸಿಲುಕಿದ ನಾಂ
ಮರೆವೊಕ್ಕೆನೊ ನಿನ್ನಂ ಸುಜನಾಪ್ತನೆ—ಎಂಟುಂತೋಳೊಡೆಯನೆ ವಿಭುವೇ ‖ ೧ ‖

ನೀನೊಬ್ಬನೆ ಎನ್ನೊಡೆಯನು ವಿಭುವೇ ನಿನ್ನಡಿಯಾಳಾಂ ಪರತಂತ್ರಂ;
ನೀನೇ ನಿನ್ನಡಿದಾವರೆಯಾಸೆಯರ್ ಎನ್ನೀಯೆದೆಯೊಳ್ ಮೂಡಿಸಿದೈ
ಅರಿಯಲಶಕ್ತಿಗೆ ಸರಿಯುಹ ನಾನುಂ ವಸ್ತುತ್ವದ ನೆಲೆಗಾಕರನಾದಾ
ಎಂಟುಂ ತೋಳ್ಗಳ ಸರ್ವಾಧಾರದ ನಿನ್ನಾಸರೆಯೊಳೆ ಬಾಳಲಿಹೆಂ ‖ ೨ ‖

ನಿಜಮಂಗಳಗುಣಗಣದಿಂ ರೂಪದಿಂ ಅಸ್ತ್ರಾಭರಣಂಗಳ ಬಗೆಯಿಂ
ಪರತತ್ತ್ವಂ ನೀನೆಂಬೀ ಚಿಂತನೆ ಮರಯಲ್ಕಾಗದ ತೆರವಿರುವೈ
ಮನವಚನಂಗಳ ಗಡಿಯಂ ಮೀರಿದ ಪರಮಾದ್ಭುತ ದಿವ್ಯಸ್ಥಿತಿಯಂ
ಮರೆಮಾಡುವೆ ನತಜನರನುಭೋಗಕೆ ಮೃದುತೆಯೆ ಸರಿ ಮೊದಲೆಂದೆಣಿಸಿ ‖ ೩ ‖

ಪೊರೆಯಲ್ಬಲ್ಲವರೆಂಬುವ ಹೆಸರಿನ ಬೇರೆಯ ವಿಭುಗಳ ಶಕ್ತಿಯುಮಂ
ದೊರೆವಾ ಬೇರೆಯ ಫಲಗಳ ತಿರುಳಂ ಮನದೊಳೆ ತೂಗಿ ವಿಮರ್ಶಿಸುತ
ನಿನ್ನಡಿಯಾಳಿಕೆಗಾಗಿಯೆ ಬಯಸುತ ನಿನ್ನೊಳೆ ನಂಬುಗೆ ಬಲಿದಿರಲು
ನಿಶ್ಶಂಕೆಯಿನಾತ್ಮಾರ್ಪಣೆಮಾಡಿದ ಶರಣರ ಹೊರೆಯಂ ನೀಂ ಹೊರುವೈ
—ಓ ಪ್ರಭುವೇ ‖ ೪ ‖

ಅಭಯಸ್ಥಿತಿಯಂ ಕೊಡಬಲ್ಲವರೆಂದು ಅನುಸರಿಸಲು ಜಗದಿ
ನಿನ್ನಂ ಬಿಟ್ಟನ್ನಾರನು ಕಾಣೆನೊ ಎನ್ನೊಡೆಯನೆ ದಿಟದಿ
ಕಾರುಣ್ಯಯುತಂ ನೀನಾಗಿರೆ ಬಳಿಕ—ಎತ್ತಣದೋ ಭಯವು
ಒದಗಿತು ರೋಷಂ ನಿನಗೆನೆ ಬಳಿಕ—ಇನ್ನೆತ್ತಣ ರಕ್ಷೆ ವಿಭೂ ‖ ೫ ‖

ತ್ವದೇಕತಂತ್ರಂ ಕಮಲಾಸಹಾಯ
ಸ್ವೇನೈವ ಮಾಂ ರಕ್ಷಿತುಂ—ಅರ್ಹಸಿ ತ್ವಂ
ತ್ವಯಿಪ್ರವೃತ್ತೇ ಮಮ ಕಿಂ ಪ್ರಯಾಸೈಃ
ತ್ವಯ್ಯಪ್ರವೃತ್ತೇ ಮಮ ಕಿಂ ಪ್ರಯಾಸೈಃ ॥ ೬ ॥

ಸಮಾಧಿ ಭಂಗೇಷ್ವಪಿ ಸಂಪತತ್ಸು
ಶರಣ್ಯಭೂತೇ ತ್ವಯಿ ಬದ್ಧಕಕ್ಷ್ಯೇ
ಅಪತ್ರಪೇ ಸೋಢುಂ—ಅಕಿಂಚನೋಹಂ
ದೂರಾಧಿರೋಹಂ ಪತನಂ ಚ ನಾಥ ॥ ೭ ॥

ಪ್ರಾಪ್ತಾಭಿಲಾಷಂ ತ್ವದನುಗ್ರಹಾನ್ಮಾಂ
ಪದ್ಮಾನಿಷೇವ್ಯೇ ತವಪಾದಪದ್ಮೇ
ಆದೇಹಪಾತಾತ್—ಅಪರಾಧದೂರಂ
ಆತ್ಮಾಂತ ಕೈಂಕರ್ಯ ರಸಂ ವಿಧೇಯಾಃ ॥ ೮ ॥

ಪ್ರಪನ್ನ ಜನಪಾಥೇಯಂ
ಪ್ರಪಿತ್ಸೂನಾಂ ರಸಾಯನಂ
ಶ್ರೇಯಸೇ ಜಗತಾಂ—ಏತತ್
ಶ್ರೀಮದಷ್ಟಭುಜಾಷ್ಟಕಂ ॥ ೯ ॥

ಶರಣಾಗತ ಸಂತ್ರಾಣ ತ್ವರಾ ದ್ವಿಗುಣಬಾಹುನಾ
ಹರಿಣಾ ವೆಂಕಟೇಶೀಯಾ ಸ್ತುತಿಃ ಸ್ವೀಕ್ರಿಯತಾಮಿಯಂ ॥ ೧೦ ॥

ಶ್ರೀಃ

ಕವಿತಾರ್ಕಿಕ ಸಿಂಹಾಯ ಕಲ್ಯಾಣಗುಣಶಾಲಿನೇ ॥
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ ॥

---

ಕಮಲಾನಾಥನೆ ! ನಿಶ್ಚಿತವೆನಗಿದು ನೀನೋರ್ವನೆ ಗತಿಯೈ
ನಿಜಕೃಪೆಯಿಂದಲೆ ಕೈವಿಡಿಯುತೆ ನೀಂ ಕಾಯಲ್ ತಕ್ಕವನೈ
ಕೈಯಿಡೆ ನೀನೆನಗಾಯಸವುಂಟೇ ಕೈಬಿಡಲಾಯಸದಿಂ ಫಲವುಂಟೇ
[ಕಾರುಣ್ಯನಿಧೀ ನೀನೇ ಬಲ್ಲೈ ನಮ್ಮಿಬ್ಬರ ನೆಲೆಯಂ] ॥ ೬ ॥

ಸಮಾಧಿಯಿಂದಾರಾಧಿಸೆ ಯತ್ನಿಸಿ ಹಲವರು ತೊಡಕಿಂ ಸುರುಳುತಿರೆ
ಶರಣ್ಯಭೂತಂ ನಡುಕಟ್ಟುತೆ ನೀಂ ಅವರುದ್ಧಾರಕೆ ಸುಂದೆ ವರೆ
ಅವಾಧಾರದ ಕುರುಹೂ ಇಲ್ಲದ ನಾನುಂ ನಾಚದೆ ಬೇಡುವೆನೈ
ವಿರಲ್ಕಾಗದ ದೂರಕ್ಕುರುಳಿರ್ಪ—ಎನ್ನಂ ಮನ್ನಿಸಿ ಪೊರೆ ವಿಭುವೇ ॥ ೭ ॥

ಸಿರಿಯನುದಿನವುಂ ಸೇವಿಪ ನಿನ್ನಯ ಚರಣಾಂಭೋರುಹಕೆ
ನಿನ್ನ ಹಸಾದದೊಳೇ ಎನಗಾಯಿತು ಬಳಿಸಲ್ಲುವ ಬಯಕೆ
ಒಡಲಿದು ಬೀಳುವವರೆಗೂ ನಿನ್ನಯ ಸನ್ನಿಧಿ ಗುರಿಯೆನಲು
ಅಪರಾಧದ ಸೆಲೆಯಿಲ್ಲದ ಸೇವೆಯ ಸುಖವಂ ನೀಡು ವಿಭೂ ॥ ೮ ॥

ಮರೆಹೊಕ್ಕು ನಡೆವವರ್ಗಿದು ದಾರಿಗರ ಬುತ್ತಿ
ಹೊಗಲಿರುವ ಜನಕಿದುವೆ ವರ ರಸಾಯನವು
ಜಗದ ನಲ್ಮೆಯ ಬಯಕಿ ಹೊರಹೊಮ್ಮಿತೀಯಿಂತು
ಸಿರಿಗೂಡಿದಷ್ಟಭುಜ ವಿಭುವಿನಷ್ಟಕವು ॥ ೯ ॥

ಮರೆಹೊಕ್ಕವರಂ ಪೊರೆವಾ
ತ್ವರೆಯಿಂದಿಮ್ಮಡಿಸೆ ತೋಳ್ಗಳೊಲುಮೆಯ ಮೆರೆದಾ
ಹರಿಯಿಂದೆ ವೇಂಕಟೇಶ್ವರ
ವಿರಚಿತ ನುತಿಯಿದು ಪರಿಗ್ರಹಂಬಡೆಗೊಲವಿಂ ॥ ೧೦ ॥

ನಿಗಮಂಗಳ ಹುರುಳೆಲ್ಲಂ
ಬಗೆವುಗೆ ಜಗದೀಶನಡಿಯ ಮರೆಹೊಗುವವರಾ
ಬಗೆಯಂ ಬಿತ್ತರಿಪೀ ನುಡಿ
ಸೊಗವಡೆ ಕನ್ನಡಿಗರಾಯ್ತು ಗುರುಕೃಪೆಯಿಂದಂ

ಕವಿತಾರ್ಕಿಕ ಸಿಂಹಂಗೆ। ಕಲ್ಯಾಣಗುಣಶಾಲಿಗೆ
ವೇದಾಂತಾಚಾರ್ಯವರ್ಯಂಗೆ। ವೇಂಕಟೇಶಂಗೆ ವಂದಿಪೆಂ.

---

